KA / BG-GPO / 2515 / WPP-47 / 2006-2008



# ಕರ್ನಾಟಕ ರಾಜ್ಯಪತ್ರ



| ಸಂಪುಟ ೧೪೧ | ಬೆಂಗಳೂರು, ಗುರುವಾರ, ನವೆಂಬರ್ ೯, ೨೦೦೬ (ಕಾರ್ತಿಕ ೧೮, ಶಕ ವರ್ಷ ೧೯೨೮) | ಸಂಚಿಕೆ ೪೪ |
|---|---|---|



## ಭಾಗ - ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಶಿಕ್ಷಣ ಇಲಾಖೆ**

**ಅಧಿಸೂಚನೆ ಸಂಖ್ಯೆ: ಇಡಿ 252 ಯುಪಿಸಿ 2006, ದಿನಾಂಕ: 18ನೇ ಅಕ್ಟೋಬರ್ 2006**

ಸಾಗರದ ಲಾಲ್‌ಬಹದ್ದೂರ್ ಕಲಾ, ವಿಜ್ಞಾನ ಮತ್ತು ಎಸ್.ಬಿ.ಸೊಲಬಣ್ಣಶೆಟ್ಟಿ ವಾಣಿಜ್ಯ ಕಾಲೇಜಿನಲ್ಲಿ ವಾಣಿಜ್ಯಶಾಸ್ತ್ರ ಅರೆಕಾಲಿಕ ಉಪನ್ಯಾಸಕರಾಗಿ 1993-94 ಮತ್ತು 1994-95ನೇ ಸಾಲಿನಿಂದ ಈವರೆಗೂ ಅದೇ ಕಾಲೇಜಿನಲ್ಲಿ ಕಾರ್ಯನಿರ್ವಹಿಸುತ್ತಿರುವ ಡಾ: ಲಕ್ಷ್ಮೀಶ ಎ.ಎಸ್. ರವರು ಎಸ್.ಎಲ್.ಇ.ಟಿ, ಎಂ.ಫಿಲ್ ಮತ್ತು ಪಿ.ಹೆಚ್.ಡಿ.ಯನ್ನು ಪಾಸು ಮಾಡಿದ್ದು ಇವರ ಸೇವೆಯನ್ನು ಕರ್ನಾಟಕ ಶಿಕ್ಷಣ ಸಂಸ್ಥೆಗಳು (ಅನುದಾನಿತ ಖಾಸಗಿ ಶಿಕ್ಷಣ ಸಂಸ್ಥೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಅರೆಕಾಲಿಕ ಉಪನ್ಯಾಸಕರ ಸೇವಾ ವಿಲೀನತೆ (ವಿಶೇಷ) ನಿಯಮಗಳು 2003 ರಡಿಯಲ್ಲಿನ ಅವಕಾಶ ಮತ್ತು ಇದಕ್ಕೆ ಸಂಬಂಧಿಸಿದಂತೆ ಹೊರಡಿಸಲ್ಪಟ್ಟ ಸ್ಪಷ್ಟೀಕರಣ / ಮಾರ್ಗಸೂಚಿಗಳನ್ವಯ ಈ ನಿಯಮಾವಳಿ ಮತ್ತು ಸ್ಪಷ್ಟೀಕರಣ ಮಾರ್ಗಸೂಚಿಗಳಿಗೆ ಹಾಗೂ ಈ ಕೆಳಕಂಡ ಷರತ್ತುಗಳಿಗೆ ಬದ್ಧವಾಗಿರುವ ಷರತ್ತಿಗೊಳಪಡಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಅದೇ ಕಾಲೇಜಿನಲ್ಲಿ ವಾಣಿಜ್ಯಶಾಸ್ತ್ರ ವಿಭಾಗದಲ್ಲಿ ಮಂಜೂರಾದ ಹಾಗೂ ವೇತನಾನುದಾನಕ್ಕೆ ಒಳಪಟ್ಟಿದ್ದ ಶ್ರೀ ಪಿ.ಎಸ್.ಹೆಗಡೆ ಇವರ ವಯೋನಿವೃತ್ತಿಯಿಂದ ಖಾಲಿ ಇರುವ ಸಾಮಾನ್ಯ ಅಭ್ಯರ್ಥಿಗೆ ಮೀಸಲಾದ ಹುದ್ದೆಗೆ ಎದುರಾಗಿ ಯು.ಜಿ.ಸಿ. ವೇತನ ಶ್ರೇಣಿ ರೂ.8,000-13,200 ರಲ್ಲಿ ವಿಲೀನಗೊಳಿಸಲಾಗಿದೆ.

ಡಾ: ಲಕ್ಷ್ಮೀಶ ಎ.ಎಸ್. ರವರ ವಿವರ:

| ಅಭ್ಯರ್ಥಿಯ ಹೆಸರು | ವಿಷಯ | ವಿದ್ಯಾರ್ಹತೆ | ಪಡೆದಿರುವ ಅಂಕ ಮತ್ತು ಶೇಕಡಾವಾರು | ಜನ್ಮ ದಿನಾಂಕ | ಪ್ರವರ್ಗ | ಸೇವೆ ಸಲ್ಲಿಸಿದ/ ಸಲ್ಲಿಸುತ್ತಿರುವ ಕಾಲೇಜಿನ ಹೆಸರು | ಅರೆಕಾಲಿಕ ಉಪನ್ಯಾಸಕರಾಗಿ ಸೇವೆಗೆ ಸೇರಿದ ದಿನಾಂಕ |
|---|---|---|---|---|---|---|---|
| ಡಾ: ಲಕ್ಷ್ಮೀಶ ಎ.ಎಸ್ | ವಾಣಿಜ್ಯ ಶಾಸ್ತ್ರ | ಎಂ.ಕಾಂ., ಎಂ.ಫಿಲ್., ಪಿ.ಹೆಚ್.ಡಿ. | 63.20% | 10.02.68 | ಸಾಮಾನ್ಯ | ಸಾಗರದ ಲಾಲ್‌ಬಹದ್ದೂರ್ ಕಲಾ, ವಿಜ್ಞಾನ ಮತ್ತು ಎಸ್.ಬಿ.ಸೊಲಬಣ್ಣಶೆಟ್ಟಿ ವಾಣಿಜ್ಯ ಕಾಲೇಜು. | 25.11.1992 |

1) ಇವರ ನೇಮಕಾತಿ ತಾತ್ಕಾಲಿಕವಾಗಿದ್ದು, ಜಾರಿಯಲ್ಲಿರುವ ಸೇವಾ ಷರತ್ತುಗಳ ನಿಯಮ/ಆದೇಶಗಳ ಅಧೀನಕ್ಕೆ ಒಳಪಟ್ಟಿರುತ್ತದೆ.
2) ಇವರು ಅರ್ಹತಾ ಪರೀಕ್ಷೆಯಲ್ಲಿ ಶೇ.55 ಅಂಕಗಳನ್ನು ಪಡೆದಿರತಕ್ಕದ್ದು.
3) ಕಾಲೇಜಿನ ಪ್ರಾಂಶುಪಾಲರು ಇವರ ವಿದ್ಯಾರ್ಹತೆ, ಜನ್ಮ ದಿನಾಂಕ: ಜಾತಿ/ಮೀಸಲಾತಿ ಇವುಗಳ ಬಗ್ಗೆ ಮೂಲ ದಾಖಲೆಗಳನ್ನು ಪರಿಶೀಲಿಸಿ ಖಾತ್ರಿ ಪಡಿಸಿಕೊಳ್ಳತಕ್ಕದ್ದು. ಪರಿಶೀಲಿಸಿದ ಬಗ್ಗೆ ದೃಢೀಕರಿಸಿದ ಪ್ರಮಾಣ ಪತ್ರವನ್ನು ಅವರ ಸೇವಾ ಪುಸ್ತಕದಲ್ಲಿ ದಾಖಲಿಸತಕ್ಕದ್ದು.

2. ಈ ಆದೇಶದಲ್ಲಿ ಕಾಣಿಸಿರುವ ಸೇವಾ ಜೇಷ್ಠತೆಯಲ್ಲಿ ನ್ಯೂನತೆಗಳು ಕಂಡು ಬಂದಲ್ಲಿ ಸರಿಪಡಿಸಿರುವ ಷರತ್ತಿಗೆ ಒಳಪಟ್ಟಿರುತ್ತದೆ.

3. ಇವರು ಈ ಆದೇಶ ಸ್ವೀಕರಿಸಿದ 15 ದಿನಗಳೊಳಗಾಗಿ ಕರ್ತವ್ಯಕ್ಕೆ ವರದಿ ಮಾಡಿಕೊಳ್ಳತಕ್ಕದ್ದು. ತಪ್ಪಿದಲ್ಲಿ ಅವರ ನೇಮಕಾತಿ ತಂತಾನೆ ರದ್ದುಗೊಳ್ಳುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ. ಬಸವರಾಜು**

ಪಿ.ಆರ್. 1552 ಸರ್ಕಾರದ ಉಪ ಕಾರ್ಯದರ್ಶಿ–4, ಶಿಕ್ಷಣ ಇಲಾಖೆ (ಉನ್ನತ ಶಿಕ್ಷಣ).

**ಸಹಕಾರ ಸಂಘಗಳ ಉಪ ನಿಬಂಧಕರು, ಚಿತ್ರದುರ್ಗ ಇವರ ಕಾರ್ಯವಾಹಿಗಳು**

**ವಿಷಯ:** ಸಮಾಪನೆಯಲ್ಲಿರುವ ಧರ್ಮಪುರ ಎಣ್ಣೆ ಬೀಜದ ಬೆಳೆಗಾರರ ಸಹಕಾರ ಸಂಘ ನಿ., ಹಿರಿಯೂರು ತಾಲ್ಲೂಕು ಇದನ್ನು ಪುನಶ್ಚೇತನಗೊಳಿಸುವ ಬಗ್ಗೆ.

**ಉಲ್ಲೇಖ:** 1) ಈ ಕಛೇರಿಯ ಆದೇಶ ಸಮ ಸಂಖ್ಯೆ ದಿನಾಂಕ:

2) ಸಹಕಾರ ಸಂಘಗಳ ಸಹಾಯಕ ನಿಬಂಧಕರು ಚಿತ್ರದುರ್ಗ ಇವರು ಸಲ್ಲಿಸಿರುವ ಪ್ರಸ್ತಾವೆ ಸಂಖ್ಯೆ: ಸನಿ:30:ಸಮಾಪನೆ:ಸಿಆರ್:10:06–07, ದಿನಾಂಕ: 29.9.2006.

**ಪ್ರಸ್ತಾವನೆ:**

ವಿಷಯದಲ್ಲಿ ನಮೂದಿಸಿರುವ ಸಹಕಾರ ಸಂಘವನ್ನು ಉಲ್ಲೇಖ (1)ರ ಆದೇಶದನ್ವಯ ಸಮಾಪನೆಗೊಳಿಸಿ ಸಹಕಾರ ಅಭಿವೃದ್ಧಿ ಅಧಿಕಾರಿ ಹಿರಿಯೂರು ಇವರನ್ನು ಸಮಾಪನಾಧಿಕಾರಿಗಳನ್ನಾಗಿ ನೇಮಕ ಮಾಡಲಾಗಿತ್ತು. ಸದರಿಯವರು ಸಂಘದ ಪ್ರಭಾರವನ್ನು ವಹಿಸಿಕೊಳ್ಳುವ ಹಂತದಲ್ಲಿ ಸಂಘ ಆಡಳಿತ ಮಂಡಳಿಯವರು ಸಂಘವನ್ನು ಪುನಶ್ಚೇತನಗೊಳಿಸಿಕೊಟ್ಟಲ್ಲಿ ಮುಂದೆ ಸುಗಮವಾಗಿ ನಡೆಸಿಕೊಂಡು ಹೋಗುವುದಾಗಿ ದಿನಾಂಕ: 22.09.2006 ರಂದು ನಡೆದ ಪುನಶ್ಚೇತ ಸಭೆಯಲ್ಲಿ ಕೋರಿಕೊಂಡು ಪುನಶ್ಚೇತನ ಆದೇಶ ನೀಡುವಂತೆ ವಿನಂತಿಸಿರುವುದರ ಮೇರೆಗೆ ಉಲ್ಲೇಖ (2) ರನ್ವಯ ಚಿತ್ರದುರ್ಗ ಉಪ ವಿಭಾಗದ ಸಹಕಾರ ಸಂಘಗಳ ಸಹಾಯಕ ನಿಬಂಧಕರುರವರು ಸಂಘವನ್ನು ಪುನಶ್ಚೇತನಗೊಳಿಸಿ ಆದೇಶ ನೀಡಲು ವಿನಂತಿಸಿರುತ್ತಾರೆ. ಸದರಿಯವರ ಮನವಿಯನ್ನು ಪುರಸ್ಕರಿಸಿ ಸಂಘ ಆರ್ಥಿಕ ಸ್ಥಿತಿಯನ್ನು ಹೆಚ್ಚಿಸುವ ಬಗ್ಗೆ ಹಾಗೂ ವ್ಯವಹಾರಗಳನ್ನು ಹೆಚ್ಚಿಸುವ ಬಗ್ಗೆ ಸೂಕ್ತ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವ ಷರತ್ತುಗಳಿಗೊಳಪಟ್ಟು ಸಂಘವನ್ನು ಪುನಶ್ಚೇತನಗೊಳಿಸುವ ಅಭಿಪ್ರಾಯಕ್ಕೆ ಬರಲಾಗಿದ್ದು, ಕೆಳಕಂಡ ಷರತ್ತುಗಳನ್ನು ವಿಧಿಸಲಾಗಿದೆ.

**ಷರತ್ತುಗಳು**

1) ಸಹಕಾರ ಸಂಘಗಳ ತಿದ್ದುಪಡಿ ಕಾಯ್ದೆ ರೀತ್ಯಾ ಮುಂದಿನ 5 ವರ್ಷಗಳ ಅವಧಿಗೆ ಆಡಳಿತ ಮಂಡಳಿ ಸದಸ್ಯರನ್ನು ಆಯ್ಕೆ ಮಾಡಲು ಕ್ರಮವಿಡತಕ್ಕದ್ದು.
2) ಸಂಘದ ಸದಸ್ಯರನ್ನು ಹೆಚ್ಚಿಸಿ ಷೇರು ಬಂಡವಾಳವನ್ನು ಹೆಚ್ಚಿಸಿಕೊಳ್ಳುವ ಬಗ್ಗೆ ಕ್ರಮವಿಡುವುದು.
3) ಸಂಘಕ್ಕೆ ಪೂರ್ಣಾವಧಿಯ ಕಾರ್ಯದರ್ಶಿಯವರನ್ನು ನೇಮಕ ಮಾಡಿಕೊಂಡು ಸಂಘದ ವ್ಯವಹಾರಗಳನ್ನು ಸಹಕಾರ ಸಂಘಗಳ ಕಾಯ್ದೆ ಮತ್ತು ಸಂಘದ ಉಪನಿಯಮಗಳನ್ವಯ ನಡೆಸಿಕೊಂಡು ಹೋಗತಕ್ಕದ್ದು.
4) ಸಂಘವು ಸಲ್ಲಿಸಿರುವ ಕ್ರಿಯಾಯೋಜನೆ ರೀತ್ಯಾ ಕಾರ್ಯಕ್ರಮವನ್ನು ರೂಪಿಸಿಕೊಂಡು, ಸಂಘದ ಅಭಿವೃದ್ಧಿಗೆ ಕ್ರಮವಿಡುವುದು.

ಮೇಲ್ಕಂಡ ಷರತ್ತುಗಳಿಗೊಳಪಟ್ಟು ಸಂಘವನ್ನು ಪುನಶ್ಚೇತನಗೊಳಿಸಿ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಡಿಆರ್‌ಡಿ:ಸಮಾಪನೆ:ಪುನಶ್ಚೇತನ:ಧ.ಐ.ಬಿ:ಸಿಆರ್:01:06–07, ದಿನಾಂಕ: 30ನೇ ಸೆಪ್ಟೆಂಬರ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಮೇರೆಗೆ ಸಹಕಾರ ಸಂಘಗಳ ಕಾಯ್ದೆ ಕಲಂ 72(3) ರನ್ವಯ ಮತ್ತು ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:243:ಸಿಎಲ್ಎಂ:91, ದಿನಾಂಕ: 4.5.1994ರ ಪ್ರಕಾರ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಚಿತ್ರದುರ್ಗ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರು, ಟಿ.ಓ. ಸುನಂದಮ್ಮ, ಆದ ನಾನು ಧರ್ಮಪುರ ಎಣ್ಣೆ ಬೀಜದ ಬೆಳೆಗಾರರ ಸಹಕಾರ ಸಂಘ ನಿ., ಹಿರಿಯೂರು ತಾಲ್ಲೂಕು ಇದನ್ನು ಪುನಶ್ಚೇತನಗೊಳಿಸಿರುತ್ತೇನೆ. ಸಂಘದ ಆಡಳಿತ ಮಂಡಳಿಯವರು ಒಂದು ವರ್ಷದೊಳಗೆ ಪ್ರಸ್ತಾವನೆಯಲ್ಲಿ ವಿಧಿಸಿರುವ ಷರತ್ತುಗಳನ್ವಯ ಸಂಘದ ವ್ಯವಹಾರಗಳನ್ನು ನಡೆಸಿ ಸಂಘವನ್ನು ಪುನಶ್ಚೇತನಗೊಳಿಸುವ ಬಗ್ಗೆ ಸೂಕ್ತ ಕ್ರಮವಿಡಲು ನಿರ್ದೇಶಿಸಿದೆ.

ಈ ಆದೇಶವನ್ನು ದಿನಾಂಕ: 30.9.2006 ರಂದು ನನ್ನ ಸ್ವ ಸಹಿ ಮತ್ತು ಕಛೇರಿಯ ಮುದ್ರೆಯೊಂದಿಗೆ ಹೊರಡಿಸಲಾಗಿದೆ.

ಸಹಕಾರ ಸಂಘಗಳ ಉಪ ನಿಬಂಧಕರು,

ಪಿ.ಆರ್. 1553 ಚಿತ್ರದುರ್ಗ ಜಿಲ್ಲೆ ಚಿತ್ರದುರ್ಗ.

**COMMERCIAL TAXES DEPARTMENT**

**PROCEEDINGS OF THE COMMISSIONER OF COMMERCIAL TAXES (KARNATAKA), BANGALORE-CLARIFICATION UNDER SECTION 59(4) OF THE KARNATAKA VALUE ADDED TAX ACT, 2003.**

**Subject:** KVAT Act, 2003-Clarification under Section 59(4) regarding rate of tax applicable on works contract of repair and service of photocopiers.

**Ref:** Application dated: 01.09.2006 of Bee Electronic Machines Limited, No.29, M.M.Industrial Estate, K.R.Road, Yediyur, Jayanagar 7th Block, Bangalore-560 082.

In its application cited at reference above, the applicant has sought clarification regarding rate of tax applicable on works contract of repair and service of photocopiers.

2. Section 59(4) of the Karnataka Value Added Tax Act, 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purposes of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

**CLARIFICATION No. CLR.CR.144/06-07, Dated: 16th October 2006**

It is hereby clarified that the taxable turnover relating to the transfer of property in goods involved in the execution of works contract of repair and service of photocopiers whether for a Government Department or others, is taxable at 12.5% under Section 4(1)(b) of the Karnataka Value Added Tax Act, 2003 during the period from 1.4.2005 to 31.3.2006 and at 12.5% under Section 4(1)(c) read with Entry No.23 of the Sixth Schedule to the Karnataka Value added Tax Act, 2003 from 1.4.2006 onwards.

**B.A. HARISH GOWDA**

P.R. 1547 Commissioner of Commercial Taxes, (Karnataka), Bangalore.

**COMMERCIAL TAXES DEPARTMENT**

**PROCEEDINGS OF THE COMMISSIONER OF COMMERCIAL TAXES (KARNATAKA), BANGALORE-CLARIFICATION UNDER SECTION 59(4) OF THE KARNATAKA VALUE ADDED TAX ACT, 2003.**

**Subject:** KVAT Act, 2003-Clarification under Section 59(4) regarding rate of tax applicable on "electric car" sold to physically challenged persons.

**Ref:** Application dated: 21.08.2006 of Reva Electric Car Co., (Pvt.) Limited, Maini Sadan, No.38, Lavelle Road, 7th Cross, Bangalore-560 001.

In its application cited at reference above, the applicant has sought clarification regarding rate of tax applicable on "electric car" sold to physically challenged persons.

2. Section 59(4) of the Karnataka Value Added Tax Act, 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purposes of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

**CLARIFICATION No. CLR.CR.149/06-07, Dated: 16th October 2006**

It is hereby clarified that "electric car" sold to physically challenged persons would not fall under Entry Sl.No.2 of First Schedule to the Karnataka Value Added Tax Act, 2003 but is taxable at 12.5% under Section 4(1)(b) of the Karnataka Value Added Tax Act, 2003.

**B.A. HARISH GOWDA**

P.R. 1548 Commissioner of Commercial Taxes, (Karnataka), Bangalore.

**COMMERCIAL TAXES DEPARTMENT**

**PROCEEDINGS OF THE COMMISSIONER OF COMMERCIAL TAXES (KARNATAKA), BANGALORE-CLARIFICATION UNDER SECTION 59(4) OF THE KARNATAKA VALUE ADDED TAX ACT, 2003.**

**Subject:** KVAT Act, 2003-Clarification under Section 59(4) regarding rate of tax applicable on certain spices and masala powders.

**Ref:** Application dated: 19.08.2006 of M/s Ushodaya Enterprises Limited (Priya Foods-Edible Oils Division), No.1733/33, 17th Cross, M.C.Layout, Vijayanagar, Bangalore-560040.

In its application cited at reference above, the applicant has sought clarification regarding rate of tax applicable on certain commodities like spices, pickles, masala powders, Masala pastes, papads, instant mixes and ready to eat food products.

2. Section 59(4) of the Karnataka Value Added Tax Act, 2003 empowers the Commissioner of Commercial Taxes to clarify the rate of tax payable under the Act, if he considers it necessary or

expedient so to do, for the purposes of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

**CLARIFICATION No. CLR.CR.132/06-07, Dated: 16th October 2006**

It is hereby clarified that the rate of tax on the following commodities are as follows:

| Sl.No. | Commodity | Rate of tax |
|---|---|---|
| 1 | All kinds of pickles | 4% under Sl.No.3 of Third Schedule to the Karnataka Value Added Tax Act, 2003. |
| 2 | Chilli Powder | 4% under Sl.No.3 of Third Schedule to the Karnataka Value Added Tax Act, 2003. |
| 3 | Turmeric Powder | 4% under Sl.No.3 of Third Schedule to the Karnataka Value Added Tax Act, 2003. |
| 4 | Dhania Powder | 4% under Sl.No.3 of Third Schedule to the Karnataka Value Added Tax Act, 2003. |
| 5 | Jeera Powder | 4% under Sl.No.3 of Third Schedule to the Karnataka Value Added Tax Act, 2003. |
| 6 | Sambar Powder | 12.5% under Section 4(1)(b) of the Karnataka Value Added Tax Act, 2003. |
| 7 | Rasam Powder | 12.5% under Section 4(1)(b) of the Karnataka Value Added Tax Act, 2003. |
| 8 | Garam Masala Powder | 12.5% under Section 4(1)(b) of the Karnataka Value Added Tax Act, 2003. |
| 9 | All Masala Powders | 12.5% under Section 4(1)(b) of the Karnataka Value Added Tax Act, 2003. |
| 10 | All Masala Pastes | 12.5% under Section 4(1)(b) of the Karnataka Value Added Tax Act, 2003. |
| 11 | Traditional Powers:<br>a) IdliKaram<br>b) Nalla Karam<br>c) Curry Leaf Powder<br>d) Curry Chilli Powder<br>e) Kandi Podi<br>f) Nuvvula Podi<br>g) Versenage Podi | 12.5% under Section 4(1)(b) of the Karnataka Value Added Tax Act, 2003. |
| 12 | Instant Mixes | 12.5% under Section 4(1)(b) of the Karnataka Value Added Tax Act, 2003. |
| 13 | Tik Lik | 12.5% under Section 4(1)(b) of the Karnataka Value Added Tax Act, 2003. |
| 14 | Ready to Eat food products | 12.5% under Section 4(1)(b) of the Karnataka Value Added Tax Act, 2003. |
| 15 | Papads | Exempted under Sl.No.40 of First Schedule to the Karnataka Value Added Tax Act, 2003. |

**B.A. HARISH GOWDA**

P.R. 1549 Commissioner of Commercial Taxes, (Karnataka), Bangalore.

## ಗೃಹ ಆಯುಕ್ತರು, ಕರ್ನಾಟಕ ಗೃಹ ಮಂಡಳಿ, ಕಾವೇರಿ ಭವನ, ಬೆಂಗಳೂರು

### ಭೂಸ್ವಾಧೀನ ಕಾಯ್ದೆ ಕಲಂ 4(1)ರ ಅನ್ವಯ ಅಧಿಸೂಚನೆ

### ಕ್ರಮಾಂಕ: ಕಗೃಮಂ. ಭೂಸ್ವಾವಿ. 2/06-07, ದಿನಾಂಕ: 23ನೇ ಆಗಸ್ಟ್ 2006

ಈ ಅಧಿಸೂಚನೆಯಲ್ಲಿ ನಮೂದಿಸಿರುವ ಜಮೀನುಗಳು ಸಾರ್ವಜನಿಕ ಉದ್ದೇಶಕ್ಕೆ ಅಂದರೆ, ಕರ್ನಾಟಕ ಗೃಹ ಮಂಡಳಿಯ ವಸತಿ ಯೋಜನೆಗೆ ಬೇಕಾಗುವುದೆಂದು ಗೃಹ ಆಯುಕ್ತರು, ಕರ್ನಾಟಕ ಗೃಹ ಮಂಡಳಿ, ಬೆಂಗಳೂರು ರವರಿಗೆ ಕಂಡು ಬಂದಿದೆ.

1991ನೇ ಸಾಲಿನ ಕರ್ನಾಟಕ ಭೂಸ್ವಾಧೀನ ಅಧಿನಿಯಮ 33 ರಲ್ಲಿ ತಿದ್ದುಪಡಿಯಾದ 1894ನೇ ಸಾಲಿನ ಭೂಸ್ವಾಧೀನ ಅಧಿನಿಯಮ 4(2)ನೆಯ ಪ್ರಕರಣದಲ್ಲಿ ವಿಹಿತವಾದ ಅಧಿಕಾರವನ್ನು ಉಪಯೋಗಿಸಲು ಗೃಹ ಆಯುಕ್ತರು, ಕರ್ನಾಟಕ ಗೃಹ ಮಂಡಳಿ, ಬೆಂಗಳೂರು. ಇವರಿಗೆ ಮತ್ತು ಸಿಬ್ಬಂದಿ ವರ್ಗದವರಿಗೆ ಅಧಿಕಾರ ನೀಡಲಾಗಿದೆ.

ಸದರಿ ಜಮೀನಿನಲ್ಲಿ ಆಸಕ್ತಿಯುಳ್ಳ ಯಾವೊಬ್ಬ ವ್ಯಕ್ತಿಯೂ ಭೂಸ್ವಾಧೀನದ ಬಗ್ಗೆ ಆಕ್ಷೇಪಣೆಗಳನ್ನು ಮಾಡುವುದಿದ್ದಲ್ಲಿ ಅಂತಹ ಆಕ್ಷೇಪಣೆಗಳನ್ನು ಈ ಅಧಿಸೂಚನೆಯು ಪ್ರಕಟಗೊಂಡ ತಾರೀಖಿನಿಂದ 30 ದಿನಗಳೊಳಗಾಗಿ 1991ನೇ ಇಸವಿ ಕರ್ನಾಟಕ ಭೂಸ್ವಾಧೀನ ಅಧಿನಿಯಮ ಕಾಯ್ದೆ 33 ರಲ್ಲಿ ತಿದ್ದುಪಡಿಯಾದ 1894ನೇ ಸಾಲಿನ ಭೂ ಸಂಗ್ರಹಣ ಅಧಿನಿಯಮದ 3ರ ಪ್ರಕರಣದ ಮೇರೆಗೆ ಜಿಲ್ಲಾಧಿಕಾರಿಗಳ ಪ್ರಶಾಸನ ಕಾರ್ಯಗಳನ್ನು ನಿರ್ವಹಿಸಲು ನೇಮಕ ಮಾಡಲಾದ ವಿಶೇಷ ಭೂಸ್ವಾಧೀನಾಧಿಕಾರಿಗಳು, ಕರ್ನಾಟಕ ಗೃಹ ಮಂಡಳಿ, ಕಾವೇರಿ ಭವನ, ಬೆಂಗಳೂರು, ರವರಿಗೆ ಲಿಖಿತ ಮೂಲಕ ಅರ್ಜಿಗಳನ್ನು ಸಲ್ಲಿಸತಕ್ಕದ್ದು.

ಸದರಿ ಜಮೀನಿನ ಅಧಿಕೃತ ಸಂಗ್ರಹಣೆಗಾಗಿ ನಿಯೋಜಿಸಲ್ಪಟ್ಟ ಯಾವೊಬ್ಬ ಮೋಜಣಿದಾರರು ಅಥವಾ ಬೇರೆ ಯಾವುದೇ ಅಧಿಕಾರಿಗೆ ಅಡಚಣೆಗಳನ್ನುಂಟು ಮಾಡುವುದಾಗಲೀ ಅಥವಾ ಅತಿಕ್ರಮಿಸುವುದಾಗಲಿ ಮಾಡಬಾರದೆಂದು ಸದರಿ ಜಮೀನಿನಲ್ಲಿ ಆಸಕ್ತಿಯುಳ್ಳ ಎಲ್ಲರಿಗೂ ಈ ಮೂಲಕ ಎಚ್ಚರಿಕೆ ಕೊಡಲಾಗಿದೆ. ಸದರಿ ಜಮೀನಿನ ವಿಲೇವಾರಿಗಾಗಿ ಮಾರಾಟ ಗುತ್ತಿಗೆ, ಅಡಮಾನ, ಹಸ್ತಾಂತರಣ, ವಿನಿಮಯ ಇನ್ನಾವುದೇ ರೀತಿಯ ಒಪ್ಪಂದಗಳನ್ನು ಅಥವಾ ಯಾವೊಂದು ವೆಚ್ಚ ಯಾ ಅಭಿವೃದ್ಧಿಗಳನ್ನು ಈ ಅಧಿಸೂಚನೆ ಪ್ರಕಟವಾದ ನಂತರ ಗೃಹ ಆಯುಕ್ತರ ಮಂಜೂರಾತಿಯನ್ನು ಪಡೆಯದೆಯೇ ಮಾಡಿದ ಪಕ್ಷದಲ್ಲಿ ಅಂತಿಮವಾಗಿ ಅಧಿಕೃತ ಸಂಗ್ರಹಣೆ ಮಾಡಲಾಗುವ ಸದರೀ ಜಮೀನಿನ ಅಂತಹ ಭೂ ಪರಭಾರೆಯ ಪರಿಹಾರವನ್ನು ನಿರ್ಧರಿಸುವ ಅಧಿಕಾರಿಯಿಂದ ಸದರಿ ಅಧಿನಿಯಮ 24ನೇ ಪ್ರಕರಣದ ಮೇರೆಗೆ ಉಪೇಕ್ಷಿಸಲಾಗುವುದು.

ಸದರಿ ಜಮೀನಿನ ಒಂದು ನಕ್ಷೆಯನ್ನು ವಿಶೇಷ ಭೂಸ್ವಾಧೀನ ಅಧಿಕಾರಿಗಳು, ಕರ್ನಾಟಕ ಗೃಹ ಮಂಡಳಿ, ಕಾವೇರಿ ಭವನ, ಬೆಂಗಳೂರು. ಇವರ ಕಾರ್ಯಾಲಯದಲ್ಲಿ ಪರಿಶೀಲನೆಗಾಗಿ ಇಡಲಾಗಿದೆ.

### ಅನುಸೂಚಿ

ಜಿಲ್ಲೆ: ಕೋಲಾರ ತಾಲ್ಲೂಕು: ಕೋಲಾರ ಹೋಬಳಿ: ಕಸಬಾ ಗ್ರಾಮ: ಹಾರೋಹಳ್ಳಿ

| ಕ್ರ. ಸಂ. | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸರ್ವೆ ನಂ. | ತರಹೆ | ಚಕ್ಕುಬಂದಿ | | | | ಬೇಕಾದ ಜಮೀನಿನ ವಿಸ್ತೀರ್ಣ ಎ.ಗುಂ. | ಆಕಾರ ರೂ.ಪೈ. |
|---|---|---|---|---|---|---|---|---|---|---|
| | | | | | ಪೂರ್ವ ಸ.ನಂ. | ಪಶ್ಚಿಮ ಸ.ನಂ. | ಉತ್ತರ ಸ.ನಂ. | ದಕ್ಷಿಣ ಸ.ನಂ. | | |
| 1 | 2 | 3 | 4 | 5 | 6 | 7 | 8 | 9 | 10 | 11 |
| 1 | ಖಾತೂಂಬಿ ಬಿನ್ ಹಕೀಂಸಾಬ್ | ಖಾತೂಂಬಿ | 77 ಪೈ | ಖುಷ್ಕಿ | 76, 88 | ಹಳ್ಳ | 78 | 75 | 5-00<br>0-02ಖ | 0-30 ಗುಂಟೆ ಮನೆ ಜಾಗ ಹೊರತುಪಡಿಸಿ |

ಪಿ.ಡಿ. 122

ಗೃಹ ಆಯುಕ್ತರು, ಕರ್ನಾಟಕ ಗೃಹ ಮಂಡಳಿ, ಬೆಂಗಳೂರು.

**ಗೃಹ ಆಯುಕ್ತರು, ಕರ್ನಾಟಕ ಗೃಹ ಮಂಡಳಿ, ಕಾವೇರಿ ಭವನ, ಬೆಂಗಳೂರು**
**ಭೂಸ್ವಾಧೀನ ಕಾಯ್ದೆ ಕಲಂ 4(1)ರ ಅನ್ವಯ ಅಧಿಸೂಚನೆಯ**
**ಕ್ರಮಾಂಕ: ಕಗೃಮಂ:ಭೂಸ್ವಾವಿ/7/06-07, ದಿನಾಂಕ: 15ನೇ ಸೆಪ್ಟೆಂಬರ್ 2006**

ಈ ಅಧಿಸೂಚನೆಯಲ್ಲಿ ನಮೂದಿಸಿರುವ ಜಮೀನುಗಳು ಸಾರ್ವಜನಿಕ ಉದ್ದೇಶಕ್ಕೆ ಅಂದರೆ, ಗೃಹ ಮಂಡಳಿಯ ಯೋಜನೆಗೆ ಬೇಕಾಗುವುದೆಂದು ಗೃಹ ಆಯುಕ್ತರು, ಕರ್ನಾಟಕ ಗೃಹ ಮಂಡಳಿ, ಬೆಂಗಳೂರು ರವರಿಗೆ ಕಂಡು ಬಂದಿದೆ.

1991ನೇ ಸಾಲಿನ ಕರ್ನಾಟಕ ಭೂಸ್ವಾಧೀನ ಅಧಿನಿಯಮ 33 ರಲ್ಲಿ ತಿದ್ದುಪಡಿಯಾದ 1894ನೇ ಸಾಲಿನ ಭೂಸ್ವಾಧೀನ ಅಧಿನಿಯಮ 4(2)ನೆಯ ಪ್ರಕರಣದಲ್ಲಿ ವಿಹಿತವಾದ ಅಧಿಕಾರವನ್ನು ಉಪಯೋಗಿಸಲು ಗೃಹ ಆಯುಕ್ತರು, ಕರ್ನಾಟಕ ಗೃಹ ಮಂಡಳಿ, ಬೆಂಗಳೂರು. ಇವರಿಗೆ ಮತ್ತು ಸಿಬ್ಬಂದಿ ವರ್ಗದವರಿಗೆ ಅಧಿಕಾರ ನೀಡಲಾಗಿದೆ.

ಸದರಿ ಜಮೀನಿನಲ್ಲಿ ಆಸಕ್ತಿಯುಳ್ಳ ಯಾವೊಬ್ಬ ವ್ಯಕ್ತಿಯೂ ಭೂಸ್ವಾಧೀನದ ಬಗ್ಗೆ ಆಕ್ಷೇಪಣೆಗಳನ್ನು ಈ ಅಧಿಸೂಚನೆಯು ಪ್ರಕಟಗೊಂಡ ತಾರೀಖಿನಿಂದ 30 ದಿನಗಳೊಳಗಾಗಿ 1991ನೇ ಇಸವಿ ಕರ್ನಾಟಕ ಭೂಸ್ವಾಧೀನ ಅಧಿನಿಯಮ ಕಾಯ್ದೆ 33 ರಲ್ಲಿ ತಿದ್ದುಪಡಿಯಾದ 1894ನೇ ಸಾಲಿನ ಭೂ ಸಂಗ್ರಹಣ ಅಧಿನಿಯಮದ 3ರ ಪ್ರಕರಣದ ಮೇರೆಗೆ ಜಿಲ್ಲಾಧಿಕಾರಿಗಳ ಪ್ರಶಾಸನ ಕಾರ್ಯಗಳನ್ನು ನಿರ್ವಹಿಸಲು ನೇಮಕ ಮಾಡಲಾದ ವಿಶೇಷ ಭೂಸ್ವಾಧೀನಾಧಿಕಾರಿಗಳು, ಕರ್ನಾಟಕ ಗೃಹ ಮಂಡಳಿ, ಬೆಂಗಳೂರು, ರವರಿಗೆ ಲಿಖಿತ ಮೂಲಕ ಅರ್ಜಿಗಳನ್ನು ಸಲ್ಲಿಸತಕ್ಕದ್ದು.

ಸದರಿ ಜಮೀನಿನ ಅಧಿಕೃತ ಸಂಗ್ರಹಣೆಗಾಗಿ ನಿಯೋಜಿಸಲ್ಪಟ್ಟ ಯಾವೊಬ್ಬ ಮೋಜಣಿದಾರರು ಅಥವಾ ಬೇರೆ ಯಾವುದೇ ಅಧಿಕಾರಿಗೆ ಅಡಚಣೆಗಳನ್ನುಂಟು ಮಾಡುವುದಾಗಲೀ ಅಥವಾ ಅತಿಕ್ರಮಿಸುವುದಾಗಲಿ ಮಾಡಬಾರದೆಂದು ಸದರಿ ಜಮೀನಿನಲ್ಲಿ ಆಸಕ್ತಿಯುಳ್ಳ ಎಲ್ಲರಿಗೂ ಈ ಮೂಲಕ ಎಚ್ಚರಿಕೆ ಕೊಡಲಾಗಿದೆ. ಸದರಿ ಜಮೀನಿನ ವಿಲೇವಾರಿಗಾಗಿ ಮಾರಾಟ ಗುತ್ತಿಗೆ, ಅಡಮಾನ, ಹಸ್ತಾಂತರಣ, ವಿನಿಮಯ ಇನ್ನಾವುದೇ ರೀತಿಯ ಒಪ್ಪಂದಗಳನ್ನು ಅಥವಾ ಯಾವೊಂದು ವೆಚ್ಚ ಅಭಿವೃದ್ಧಿಗಳನ್ನು ಈ ಅಧಿಸೂಚನೆ ಪ್ರಕಟವಾದ ನಂತರ ಗೃಹ ಆಯುಕ್ತರ ಮಂಜೂರಾತಿಯನ್ನು ಪಡೆಯದೆಯೇ ಮಾಡಿದ ಪಕ್ಷದಲ್ಲಿ ಅಂತಿಮವಾಗಿ ಅಧಿಕೃತ ಸಂಗ್ರಹಣೆ ಮಾಡಲಾಗುವ ಸದರೀ ಜಮೀನಿನ ಅಂತಹ ಭೂ ಪರಭಾರೆಯ ಪರಿಹಾರವನ್ನು ನಿರ್ಧರಿಸುವ ಅಧಿಕಾರಿಯಿಂದ ಸದರಿ ಅಧಿನಿಯಮ 24ನೇ ಪ್ರಕರಣದ ಮೇರೆಗೆ ಉಪೇಕ್ಷಿಸಲಾಗುವುದು.

ಸದರಿ ಜಮೀನಿನ ಒಂದು ನಕ್ಷೆಯನ್ನು ವಿಶೇಷ ಭೂಸ್ವಾಧೀನ ಅಧಿಕಾರಿಗಳು, ಕರ್ನಾಟಕ ಗೃಹ ಮಂಡಳಿ, ಬೆಂಗಳೂರು. ಇವರ ಕಾರ್ಯಾಲಯದಲ್ಲಿ ಪರಿಶೀಲನೆಗಾಗಿ ಇಡಲಾಗಿದೆ.

**ಅನುಸೂಚಿ**

**ಜಿಲ್ಲೆ: ದಾವಣಗೆರೆ** **ತಾಲ್ಲೂಕು: ಚನ್ನಗಿರಿ** **ಹೋಬಳಿ: ಕಸಬಾ** **ಗ್ರಾಮ: ಚಿಕ್ಕೂಲಿಕೆರೆ**

| ಕ್ರ. ಸಂ. | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸರ್ವೆ ನಂ. | ತರಹೆ | ಚಕ್ಕುಬಂದಿ | | | | ವಿಸ್ತೀರ್ಣ ಎ.ಗುಂ. | ಆಕಾರ |
|---|---|---|---|---|---|---|---|---|---|---|
| | | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ | | |
| 1 | 2 | 3 | 4 | 5 | 6 | 7 | 8 | 9 | 10 | 11 |
| 1 | ಆರ್.ಹನುಮಂತಪ್ಪ ಬಿನ್ ಲೇಟ್ ರಂಗಪ್ಪ | ಆರ್. ಹನುಮಂತಪ್ಪ | 83/1-ಪಿ1 | ಖುಷ್ಕಿ | 79 | ರಸ್ತೆ | 78 | 83ರ ಉಳಿದ ಭಾಗ | 4-09.08 | 3.50 |
| 2 | ಆರ್.ಸೋಮಶೇಖರಪ್ಪ ಬಿನ್ ಲೇಟ್ ರಂಗಪ್ಪ | ಆರ್.ಸೋಮಶೇಖರಪ್ಪ | 83/2 | ಖುಷ್ಕಿ | 79 | ರಸ್ತೆ | 83/1 | ಉಳಿದ ಭಾಗ | 1-09 | 0.96 |
| 3 | ಎಸ್.ಬಿ.ಜಯಮ್ಮ ಕೋಂ ಸಿ.ಆರ್.ಹೋಭಳಿಧಾರ್ | ಎಸ್.ಬಿ.ಜಯಮ್ಮ | 83/3ಪಿ1 | ಖುಷ್ಕಿ | 82 | ರಸ್ತೆ | 83/2 | ಉಳಿದ ಭಾಗ | 2-10 | 1.76 |
| 4 | ಎಸ್.ಬಿ.ಜಯಮ್ಮ ಕೋಂ ಸಿ.ಆರ್.ಹೋಭಳಿಧಾರ್ | ಎಸ್.ಬಿ.ಜಯಮ್ಮ | 83/3ಪಿ2 | ಖುಷ್ಕಿ | 82 | ರಸ್ತೆ | 83/4ರ ಭಾಗ | 83ರ ಉಳಿದ ಭಾಗ | 01.00 | 0.78 |
| 5 | ತಿಮ್ಮಪ್ಪ ಬಿನ್ ರಂಗಪ್ಪ ರಂಗಪ್ಪ, ಜಿ.ಎಂ.ರುದ್ರಪ್ಪ ಬಿನ್ ಜಿ.ಮಲ್ಲಪ್ಪ | ತಿಮ್ಮಪ್ಪ, ರಂಗಪ್ಪ, ಜಿ.ಎಂ.ರುದ್ರಪ್ಪ | 83/4 | ಖುಷ್ಕಿ | 82 | ರಸ್ತೆ | 83/3 | 84 ಮತ್ತು 86 | 1-25 | 1.27 |

| ಕ್ರ. ಸಂ. | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸರ್ವೆ ನಂ. | ತರಹೆ | ಚಕ್ಕುಬಂದಿ | | | | ವಿಸ್ತೀರ್ಣ ಎ.ಗುಂ. | ಆಕಾರ |
|---|---|---|---|---|---|---|---|---|---|---|
| | | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ | | |
| 1 | 2 | 3 | 4 | 5 | 6 | 7 | 8 | 9 | 10 | 11 |
| 6 | ಜಯಮ್ಮ ಕೋಂ ರಂಗಪ್ಪ | ಜಯಮ್ಮ | 84/1ಪಿ1 | ಖುಷ್ಕಿ | 84ರ ಉಳಿದ ಭಾಗ | 83 | 83 | 85 | 0–29 0.03ಖ | 0.57 |
| 7 | ರಂಗಪ್ಪ, ಗೋವಿಂದಪ್ಪ ಬಿನ್ ದೊಡ್ಡ ಭೀಮಪ್ಪ | ರಂಗಪ್ಪ, ಗೋವಿಂದಪ್ಪ | 84/1ಪಿ2 | ಖುಷ್ಕಿ | 83ರ ಉಳಿದ ಭಾಗ | 83 | 83ರ ಭಾಗ | 85 | 1–30 | 1.50 |
| 8 | ಸಿ.ಎಂ.ಶ್ರೀನಿವಾಸ ಬಿನ್ ಮೂಡ್ಲಪ್ಪ | ಸಿ.ಎಂ.ಶ್ರೀನಿವಾಸ | 84/1ಪಿ3 | ಖುಷ್ಕಿ | 83ರ ಉಳಿದ ಭಾಗ | 83 | 83ರ ಉಳಿದ ಭಾಗ | 85 | 1–30 | 1.50 |
| 9 | ಚಿಕ್ಕಪ್ಪ, ಶಿವಪ್ಪ ಬಿನ್ ನೀಲಪ್ಪ | ಚಿಕ್ಕಪ್ಪ, ಶಿವಪ್ಪ | 84/2ಪಿ1–ಪಿ1 | ಖುಷ್ಕಿ | 83ರ ಉಳಿದ ಭಾಗ | 83 | 83/1 | 85 | 5–00 0–05 ಖ | 4.50 |
| 10 | ಲೋಕಪ್ಪ ಬಿನ್ ಹೊಳೆಯಪ್ಪ | ಲೋಕಪ್ಪ | 84/2ಪಿ1–ಪಿ2 | ಖುಷ್ಕಿ | 83ರ ಉಳಿದ ಭಾಗ | 83 | 83/1 | 85 | 1–07 | 1.16 |
| 11 | ಸಿದ್ದಪ್ಪ ಬಿನ್ ಹೊಳೆಯಪ್ಪ | ಸಿದ್ದಪ್ಪ | 84/2ಪಿ2 | ಖುಷ್ಕಿ | 83ರ ಉಳಿದ ಭಾಗ | 83 | 83/2ರ ಭಾಗ | 85 | 1–07 | 1.16 |
| 12 | ಗಂಗಮ್ಮ ಕೋಂ ಕರೇಕಲ್ ಭೀಮಪ್ಪ | ಗಂಗಮ್ಮ | 85/1 | ಖುಷ್ಕಿ | 85ರ ಉಳಿದ ಭಾಗ | 86 | 84 | 85ರ ಉಳಿದ ಭಾಗ | 2–09 0–01 ಖ | 1.92 |
| 13 | ಹನುಮಂತಪ್ಪ ಬಿನ್ ಕರಿಯಪ್ಪ | ಹನುಮಂತಪ್ಪ | 85/2 ಪಿ1 | ಖುಷ್ಕಿ | 85ರ ಉಳಿದ ಭಾಗ | 86 | 85/1 | 85ರ ಉಳಿದ ಭಾಗ | 0–29 | 0.62 |
| 14 | ಭೀಮಪ್ಪ ಬಿನ್ ಕರಿಯಪ್ಪ | ಭೀಮಪ್ಪ | 85/2 ಪಿ2 | ಖುಷ್ಕಿ | 85ರ ಉಳಿದ ಭಾಗ | 86 | 85/2ರ ಭಾಗ | 85/3 | 2–05 0–01 ಖ | 1.84 |
| 15 | ಪೊಲೀಸ್ ಬುಡೇನ್ ಸಾಬ್ ಬಿನ್ ಮಮ್ಮಗ ಅಬ್ಬಾಸ್ ಸಾಬ್ | ಪೊಲೀಸ್ ಬುಡೇನ್ ಸಾಬ್ | 85/3 | ಖುಷ್ಕಿ | 85ರ ಉಳಿದ ಭಾಗ | 86 | 85/2 | 86 | 2–21 0–01 ಖ | 2.18 |
| 16 | ಮಹೂಬೂಬಿ ಬಿನ್ ಅಮೀರ್ ಅಹಮದ್ | ಮಹೂಬೂಬಿ | 86 | ಖುಷ್ಕಿ | 85 ಮತ್ತು 89 | ರಸ್ತೆ | 83/, 85 | 87 | 1–20 | 1.13 |
| 17 | ಮಹಮದ್ ಬುಡೇನ್ ಸಾಬ್, ಆಸೀರ್, ಮಹಮದ್ ಇಲಿಯಾಸ್, ಆಸೀಫ್, ಮಹಮದ್ ರಫಿ, ಮಹಮದ್ ನವೀದ್, ಮಹಮದ್ ದಸ್ತಗೀರ್, ಮಹಮದ್ ಇಮ್ರಾನ್ ಬಿನ್ ಹಯಾತ್ ಸಾಬ್ | ಮಹಮದ್ ಬುಡೇನ್ ಸಾಬ್, ಆಸೀರ್, ಮಹಮದ್ ಇಲಿಯಾಸ್, ಆಸೀಫ್, ಮಹಮದ್ ರಫಿ, ಮಹಮದ್ ನವೀದ್, ಮಹಮದ್ ದಸ್ತಗೀರ್, ಮಹಮದ್ ಇಮ್ರಾನ್ | 86/3ಪಿ | ಖುಷ್ಕಿ | 85 | ರಸ್ತೆ | 86ರ ಭಾಗ | 87ರ ಭಾಗ | 12–00 0–10 ಖ | 9.40 |

| ಕ್ರ. ಸಂ. | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸರ್ವೆ ನಂ. | ತರಹೆ | ಚಕ್ಕುಬಂದಿ | | | | ವಿಸ್ತೀರ್ಣ ಎ.ಗುಂ. | ಆಕಾರ |
|---|---|---|---|---|---|---|---|---|---|---|
| | | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ | | |
| 1 | 2 | 3 | 4 | 5 | 6 | 7 | 8 | 9 | 10 | 11 |
| 18 | ತಹರಾಬಿ ಯಾನೆ ಜೈಬುನ್ನಿಸಾ ಕೋಂ ತಲಾಕ್ ಸಾಬ್, ದಸ್ತಗೀರ್ ಸಾಬ್ ಬಿನ್ ಬಡೇ ಹುಸೇನ್‌ಸಾಬ್ | ತಹರಾಬಿ ಯಾನೆ ಜೈಬುನ್ನಿಸಾ, ದಸ್ತಗೀರ್ ಸಾಬ್ | 87/ಪಿ1 | ಖುಷ್ಕಿ | 88 | ರಸ್ತೆ | 86 | 94 | 4–35 0–02 ಖ | 3.12 |
| 19 | ಅಬ್ದುಲ್ ವಾಜಿದ್ ಬಿನ್ ಬುಡೇನ್ ಸಾಬ್ | ಅಬ್ದುಲ್ ವಾಜಿದ್ | 98/ಪಿ3 | ಖುಷ್ಕಿ | ಗ್ರಾವಲ್ ಗುಂಡಿ | 97 | 98ರ ಭಾಗ | 96 | 1–27 | 0.83 |
| 20 | ಜಲಾಲ್ ಅಹಮದ್ ಬಿನ್ ಮಹಮದ್ ಬುಡೇನ್ ಸಾಬ್ | ಜಲಾಲ್ ಅಹಮದ್ | 98/ಪಿ1–ಪಿ1 | ಖುಷ್ಕಿ | ಗ್ರಾವಲ್ ಗುಂಡಿ | 97 | 98ರ ಭಾಗ | 98 | 2.00 0.02 ಖ | 1.27 |
| 21 | ಷೇಖ್ ಮಹಬೂಬ್ ಬಿನ್ ಮಹಮದ್ ಅಮೀರ್ ಸಾಬ್ | ಷೇಖ್ ಮಹಬೂಬ್ | 98/ಪಿ1–ಪಿ2 | ಖುಷ್ಕಿ | ರಸ್ತೆ | 97 | 102 ಮತ್ತು 99 | 98ರ ಭಾಗ | 1–17 0–02.08 ಖ | |
| 22 | ಮಹಮದ್ ಸೈಫುಲ್ಲಾ ಬಿನ್ ಅಜಿಮುದ್ದೀನ್ ಸಾಬ್ | ಮಹಮದ್ ಸೈಫುಲ್ಲಾ | 98/ಪಿ3 | ಖುಷ್ಕಿ | ರಸ್ತೆ | 97 | 102 ಮತ್ತು 99 | 98ರ ಭಾಗ | 3–00 0–03 ಖ | |

**ಜಿಲ್ಲೆ: ದಾವಣಗೆರೆ ತಾಲ್ಲೂಕು: ಚನ್ನಗಿರಿ ಹೋಬಳಿ: ಕಸಬಾ ಗ್ರಾಮ: ಚನ್ನಗಿರಿ**

| ಕ್ರ. ಸಂ. | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸರ್ವೆ ನಂ. | ತರಹೆ | ಚಕ್ಕುಬಂದಿ | | | | ವಿಸ್ತೀರ್ಣ ಎ.ಗುಂ. | ಆಕಾರ |
|---|---|---|---|---|---|---|---|---|---|---|
| | | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ | | |
| 1 | 2 | 3 | 4 | 5 | 6 | 7 | 8 | 9 | 10 | 11 |
| 1 | ಗಿರಿಜಮ್ಮ ಕೋಂ ಟಿ.ಎಂ.ರಾಜಣ್ಣ | ಗಿರಿಜಮ್ಮ ಕೋಂ ಟಿ.ಎಂ.ರಾಜಣ್ಣ | 24/ಪಿ1 | ಖುಷ್ಕಿ | ಹಳ್ಳ | 23 | 25 | 24ರ ಭಾಗ | 2–02 1/2 0–02 ಖ | 2–24 |
| 2 | ಸದಾಶಿವಪ್ಪ ಬಿನ್ ಮುರಿಗೆಪ್ಪ | ಸದಾಶಿವಪ್ಪ ಬಿನ್ ಮುರಿಗೆಪ್ಪ | 24/ಪಿ2 | ಖುಷ್ಕಿ | ಹಳ್ಳ | 22 | 24ರ ಭಾಗ | ಹದ್ದಿಗಿಡಿದ ದಾರಿ | 2–04 1/2 | 2–24 |

**ಘೋಷ್ವಾರೆ**

| | ಗ್ರಾಮ: ಚಿಕ್ಕೂಲಿಕೆರೆ ವಿಸ್ತೀರ್ಣ ಎ–ಗುಂ | ಗ್ರಾಮ : ಚನ್ನಗಿರಿ ವಿಸ್ತೀರ್ಣ ಎ–ಗುಂ | ಒಟ್ಟು ವಿಸ್ತೀರ್ಣ ಎ–ಗುಂ. |
|---|---|---|---|
| | 55–39 1/2 | 4–07 | 60–06 1/2 |
| | 00–30 1/2 ಖ | 0–02 ಖ | 00–32 1/2 ಖ |
| **ಒಟ್ಟು** | **56–30** | **4–09** | **60–39** |

ಪಿ.ಡಿ. 123

ಗೃಹ ಆಯುಕ್ತರು, ಕರ್ನಾಟಕ ಗೃಹ ಮಂಡಳಿ, ಬೆಂಗಳೂರು.

**IN THE COURT OF THE ADDITIONAL REGISTRAR OF CO-OPERATIVE SOCIETIES (Indl. & Misc.,) IN KARNATAKA, OFFICE OF THE REGISTRAR OF CO-OPERATIVE SOCIETIES, BANGALORE**

**No. A(I & M)/ D4/ Sur/ 07/ 2004-05**

**Petitioner:** Secretary, Alfatha Credit Co-operative Society Ltd., Davanagere.

**V/s**

**Respondent:** 1) Sri K.J. Jayappa S/o Junjappa, Anakonda Tank Bed, Behind Anand High School, Bombu Bazaar Road, Davanagere & Others.

**Order under Section 103(2) of Karnataka Co-operative Societies Act of 1959**

Whereas the above petitioner has filed an Surcharge application under Section 69 of Karnataka Co-operative Socieites Act of 1959 against the Respondents as per the findings of the under Section 64 enquiry and claimed Rs.89,50,860/- is due from the Respondents for their alleged involment in illegal transactions in sanctioning of loans to Benami Borrowers, Besides, petitioner has also filed I.A. application under Section 103 of Karnataka Co-operative Socities Act of 1959 on 03.04.2006 to attach the immovable properties, belonging to the Respondent's wife Smt. K.J. Sharadamma W/o K.J. Jayappa.

A notice of attachment of schedule of immovable properties belonging to Respondent's wife Smt. K.J. Sharadamma was issued on 21.08.2006, calling the Respondent to furnish adquate security to the said attachment of properties, within the specified time period. Notice of attachment of immovalbe properties was served on 17.09.2006 But the Respondent has failed to furnish the adequate security to the Court for the attached immovable properties. There is no alternative left to the Court to allow the I.A. application of the petitioner in confirming the attachment of immovable properties of the Respondent's wife Smt. K.J. Sharadamma, Hence the following order.

**ORDER**

The I.A. application filed under section 103 of the Karnataka Co-operative Socieites Act of 1959 by the petitioner on 03.04.2006 is allowed. The attachment of schedule of immovable properties belonging to Respondent's wife Smt. K.J. Sharadamma W/o K.J. Jayappa as Annexered to this order made on 17.09.2006 is confirmed as per the section 103(2) of the Karnataka Co-operative Societies Act of 1959.

This order is pronounced in the open Court this Court on 30.09.2006.

Additional Registrar of Co-op, Societies,
(Indl. & Misc.,), H.O. Bangalore.

**Annexure- to No. A (I & M)/ D4/ Sur/ 07/ 2004-05**

| Sl. No. | Respondent and his relations | Khatha No. | Extents | Boundaries | | | | Occu pents by |
|---|---|---|---|---|---|---|---|---|
| | | | | North | South | East | West | |
| 1 | 2 | 3 | 4 | 5 | 6 | 7 | 8 | 9 |
| 1. | Sri K.J. Jayappa S/o Junjappa, Anakonda Tank Bed, behind Anand High School, Bombu Bazaar Road, Davanagere, his wife Smt. K.J. Sharadamma, | 3234, current # 1123 | 20x 30ft. East to West 20ft. North to South 30 ft. | Conservency Road | Main Road | Property of #939:A.63 | Property of # 939: A.61 | Smt K.J. Sharada mma W/o K.J. Jayappa, Respondent No.1 |
| | W/o K.J. Jayappa # 1123, 1124 behind High School, Anakonda Tank Bed, Davanagere. | 3234 current # 1124 | 20 x 30 ft. East to West 20 ft. North to South 30 ft. | Conservency Road | Main Road | Property belonging to Ananda High School. | House # 1123 | Smt. K.J. Sharada mma W/o K.J. Jayappa. Respondent No.1 |

Additional Registrar of Co-op, Societies,
(Indl. & Misc.,), H.O. Bangalore.

PR-1524

## ಸಹಕಾರ ಸಂಘಗಳ ಉಪ ನಿಬಂಧಕರು-1, ಬೆಂಗಳೂರು ನಗರ ಜಿಲ್ಲೆ, ಮಲ್ಲೇಶ್ವರಂ, ಬೆಂಗಳೂರು-560 003 ಇವರ ನಡವಳಿಗಳು

**ಕ್ರಮಾಂಕ: ಡಿಆರ್‌ಬಿ-1/ ಸಮಾಪನೆ/ 30/ 2006-2007, ದಿನಾಂಕ:10ನೇ ಅಕ್ಟೋಬರ್, 2006**

**ವಿಷಯ:** ಶ್ರೀ ವೆಂಕಟೇಶ್ವರ ಗೃಹ ನಿರ್ಮಾಣ ಸಹಕಾರ ಸಂಘ ನಿ., ರಾಜಾಜಿನಗರ, ಬೆಂಗಳೂರು-10, ಈ ಸಹಕಾರ ಸಂಘವನ್ನು 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 72(2) ರನ್ವಯ ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:** (1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಒಂದನೇ ವಲಯ, ಬೆಂಗಳೂರು ಇವರ ಪತ್ರ ಸಂಖ್ಯೆ: ಸನಿಬೆ-44/ ಸಮಾಪನೆ/ 03/ 2006-20, ದಿನಾಂಕ:22.05.2006.

(2) ಸಂಘದ ವಿಶೇಷಾಧಿಕಾರಿ ಮತ್ತು ಸಂಘದ ಹಿಂದಿನ ಆಡಳಿತ ಮಂಡಳಿ ಸದಸ್ಯರಿಗೆ ನೀಡಿರುವ ಈ ಕಛೇರಿಯ ಇದೇ ಕ್ರಮಾಂಕದ ದಿನಾಂಕ:27.05.2006ರ ನೋಟೀಸು.

(3) ಸಂಘದ ಕಾರ್ಯದರ್ಶಿಯವರ ಪತ್ರ ಸಂಖ್ಯೆ: ಶ್ರೀ ವೆಂಗೃನಿಸಸಂ/ ಸಮಾಪನೆ/ 11/ 2006-2007, ದಿನಾಂಕ:12.07.2006.

(4) ಸಂಘದ ಹಿಂದಿನ 7 ಜನ ನಿರ್ದೇಶಕರುಗಳು ಜಂಟಿಯಾಗಿ ಸಹಿ ಮಾಡಿ ಸಲ್ಲಿಸಿರುವ ದಿನಾಂಕ:28.07.2006ರ ಲಿಖಿತ ಹೇಳಿಕೆ.

(5) ಸಂಘದ ಹಿಂದಿನ ಅಧ್ಯಕ್ಷರು ಸಮಾಪನಾ ನೋಟೀಸಿಗೆ ನೀಡಿರುವ ಉತ್ತರ ದಿನಾಂಕ:18.07.2006.

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಒಂದನೇ ವಲಯ, ಬೆಂಗಳೂರು ಇವರು ಉಲ್ಲೇಖ (1)ರಲ್ಲಿ ಕಾಣಿಸಿರುವ ದಿನಾಂಕ:22.05.2006ರ ಪತ್ರದ ರೀತ್ಯಾ ಈ ಕಛೇರಿಗೆ ಸಲ್ಲಿಸಿರುವ ಪ್ರಸ್ತಾವನೆಯಲ್ಲಿ ಶ್ರೀ ವೆಂಕಟೇಶ್ವರ ಗೃಹ ನಿರ್ಮಾಣ ಸಹಕಾರ ಸಂಘ ನಿಯಮಿತ, ರಾಜಾಜಿನಗರ, ಬೆಂಗಳೂರು-10 ಈ ಸಹಕಾರ ಸಂಘವು ಹಿಂದಿನ ಐದು ವರ್ಷಗಳಿಂದ ತನ್ನ ಕೆಲಸ ಕಾರ್ಯಗಳನ್ನು ನಿರ್ವಹಿಸದೇ ಸ್ಥಗಿತಗೊಂಡಿರುವುದಾಗಿಯೂ ಈ ಹಿನ್ನಲೆಯಲ್ಲಿ ಸದರಿ ಸಂಘವನ್ನು ಮುಂದುವರಿಸುವುದರಿಂದ ಸಂಘದ ಸದಸ್ಯರಿಗಾಗಲೀ ಅಥವಾ ಸಾರ್ವಜನಿಕರಿಗಾಗಲೀ ಯಾವುದೇ ರೀತಿಯ ಉಪಯೋಗವಿಲ್ಲವೆಂದೂ, ಈ ಹಿನ್ನಲೆಯಲ್ಲಿ ಸದರಿ ಸಂಘವನ್ನು 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 72(2) ರೀತ್ಯಾ ಸಮಾಪನೆ ಮಾಡುವ ಬಗ್ಗೆ ಕ್ರಮ ಕೈಗೊಳ್ಳಬಹುದಾಗಿದೆ ಎಂದು ಅವರು ಈ ಕಛೇರಿಗೆ ಶಿಫಾರಸ್ಸು ಮಾಡಿರುತ್ತಾರೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಒಂದನೇ ವಲಯ, ಬೆಂಗಳೂರು ಇವರ ಪ್ರಸ್ತಾವನೆಯನ್ನು ಕೂಲಂಕುಶವಾಗಿ ಪರಿಶೀಲಿಸಿ, ಸಂಘವನ್ನು ಸಮಾಪನೆಗೊಳಿಸುವ ಬಗ್ಗೆ ಅಂತಿಮ ತೀರ್ಮಾನ ಕೈಗೊಳ್ಳುವ ಮೊದಲು, ಸಂಘದ ಹಿಂದಿನ ಆಡಳಿತ ಮಂಡಳಿಯ ಸದಸ್ಯರುಗಳಿಗೂ ಸಹ ಈ ಬಗ್ಗೆ ಅವರ ಲಿಖಿತ ವಿವರಣೆ ಏನಾದರೂ ಇದ್ದಲ್ಲಿ ಸಲ್ಲಿಸಲು ಅವಕಾಶ ನೀಡುವುದು ಸೂಕ್ತವೆಂದು ತೀರ್ಮಾನಿಸಿ, ಸಂಘದ ವಿಶೇಷಾಧಿಕಾರಿ ಮತ್ತು ಸಂಘದ ಹಿಂದಿನ ಆಡಳಿತ ಮಂಡಳಿಯ ಸದಸ್ಯರುಗಳಿಗೆ ನೀಡಲಾಗಿರುವ ಉಲ್ಲೇಖ (2)ರಲ್ಲಿ ಕಾಣಿಸಿರುವ ದಿನಾಂಕ: 27.05.2006ರ ನೋಟೀಸಿನಲ್ಲಿ ಮೇಲ್ಕಂಡ ಸಹಕಾರ ಸಂಘವನ್ನು ಕಲಂ 72(2)ರ ರೀತ್ಯಾ ಏಕೆ ಸಮಾಪನೆಗೊಳಿಸಬಾರದು ಎಂಬ ಬಗ್ಗೆ ಅವರ ಲಿಖಿತ ವಿವರಣೆ ಏನಾದರೂ ಇದ್ದಲ್ಲಿ ಈ ನೋಟೀಸು ತಲುಪಿದ 14 ದಿವಸಗಳೊಳಗಾಗಿ ಈ ಕಛೇರಿಗೆ ಸಲ್ಲಿಸುವಂತೆ ನಿರ್ದೇಶಿಸಲಾಯಿತು. ಸದರಿ ನೋಟೀಸು ಸಂಘದ ವಿಶೇಷಾಧಿಕಾರಿ ಸೇರಿದಂತೆ ಸಂಘದ ಹಿಂದಿನ ಆಡಳಿತ ಮಂಡಳಿಯ ಎಲ್ಲಾ ಎಂಟು ಜನ ಸದಸ್ಯರುಗಳಿಗೂ ಮುದ್ದಾಂ ಜಾರಿಗೊಳಿಸಲಾಗಿದೆ.

ಸಂಘದ ಕಾರ್ಯದರ್ಶಿಯವರು ಈ ಕಛೇರಿಯ ಮೇಲ್ಕಂಡ ದಿನಾಂಕ: 27.05.2006ರ ನೋಟೀಸಿಗೆ ಉಲ್ಲೇಖ (3)ರಲ್ಲಿ ಕಾಣಿಸಿರುವ ದಿನಾಂಕ:12.07.2006ರ ಪತ್ರದ ರೀತ್ಯಾ ಸಲ್ಲಿಸಿರುವ ಅವರ ಲಿಖಿತ ವಿವರಣೆಯಲ್ಲಿ ಈ ಕಛೇರಿಯ ದಿನಾಂಕ: 27.05.2006ರ ನೋಟೀಸಿನಲ್ಲಿ ತಿಳಿಸಿರುವ ಅಂಶಗಳು ವಾಸ್ತವಾಂಶಗಳಿಂದ ಕೂಡಿದ್ದು, ಸದಸ್ಯರ ಹಿತದೃಷ್ಟಿಯಿಂದ ಇನ್ನೂ ಹೆಚ್ಚಿನ ಸಮಸ್ಯೆಗಳನ್ನು ತಡೆಯಲು ಸಂಘವನ್ನು ಸಮಾಪನೆಗೊಳಿಸುವುದು ಸೂಕ್ತವೆಂಬುದಾಗಿ ತಿಳಿಸಿರುತ್ತಾರೆ.

ಸಂಘದ ಹಿಂದಿನ ನಿರ್ದೇಶಕರುಗಳಾದ (1) ಶ್ರೀ ವಿ. ಕೃಷ್ಣಪ್ರಸಾದ್, (2) ಶ್ರೀ ಸಿ.ವಿ. ಸುರೇಂದ್ರ, (3) ಶ್ರೀ ಟಿ. ಚೊಕ್ಕಲಿಂಗಂ, (4) ಶ್ರೀ ಹೆಚ್. ನರಸಿಂಹಮೂರ್ತಿ, (5) ಶ್ರೀ ಪ್ರಭಾಕರ ಹೆಚ್.ಎನ್. (6) ಶ್ರೀ ಜೆ.ವಿ. ಕಾಮೇಶ್, ಮತ್ತು (7) ಶ್ರೀ ಪಿ. ಸಂತೋಶಮ್, ಇವರುಗಳು ಜಂಟಿಯಾಗಿ ಸಹಿ ಮಾಡಿ ಸಲ್ಲಿಸಿರುವ ಅವರ ಲಿಖಿತ ವಿವರಣೆಯಲ್ಲಿ ಮೇಲ್ಕಂಡ ಸಂಘಕ್ಕೆ ಸಂಬಂಧಿಸಿದಂತೆ ಮುಂದೆ ಬರುವ ಸಮಸ್ಯೆ ಹಾಗೂ ತೊಂದರೆಗಳನ್ನು ತಪ್ಪಿಸುವ ದೃಷ್ಟಿಯಿಂದ ಸದರಿ ಸಹಕಾರ ಸಂಘವನ್ನು ಕಲಂ 72 (2)ರ ರೀತ್ಯಾ ಸಮಾಪನೆಗೊಳಿಸುವಂತೆ ಈ ಪ್ರಾಧಿಕಾರವನ್ನು ಕೋರಿರುತ್ತಾರೆ.

ಸಂಘದ ಮತ್ತೊಬ್ಬ ಹಿಂದಿನ ಅಧ್ಯಕ್ಷರು ಹಾಗೂ ಮಾಜಿ ನಿರ್ದೇಶಕರಾದ ಶ್ರೀ ಮುಕುಂದ್ ರಾವ್ ಈ ಕಛೇರಿಯ ದಿನಾಂಕ:27.05.2006ರ ನೋಟೀಸಿಗೆ ನೀಡಿರುವ ದಿನಾಂಕ:18.07.2006ರ ಪತ್ರದ ಮೂಲಕ ಅವರ ವಿವರಣೆಯನ್ನು ನೀಡಿದ್ದು, ತಮ್ಮ ಈ ವಿವರಣೆಯಲ್ಲಿ ಸಂಘವನ್ನು ಸಮಾಪನೆಗೊಳಿಸುವ ಬಗ್ಗೆ ತಮ್ಮ ವಿಶೇಷ ಸ್ಪಷ್ಟೀಕರಣ ಏನೂ ಇರುವುದಿಲ್ಲವೆಂದು ತಿಳಿಸಿರುತ್ತಾರೆ. ಆದರೆ ದಿನಾಂಕ:13.03.2003ರ ಕರಾರಿನ ರೀತ್ಯಾ ಸಂಘಕ್ಕೆ ಪಾವತಿಸಬೇಕಾದ ಮೊಬಲಗನ್ನು ಕೂಡಲೇ ಹಿಂದಿರುಗಿಸುವಂತೆ ಅಭಿವೃದ್ದಿದಾರರಿಗೆ ಸೂಚನೆ ನೀಡಬೇಕೆಂದು ಅವರು ಕೋರಿರುತ್ತಾರೆ.

ಸಂಘದ ಕಾರ್ಯದರ್ಶಿ ಮತ್ತು ಸಂಘದ ಹಿಂದಿನ ಅಧ್ಯಕ್ಷರು ಹಾಗೂ ಆಡಳಿತ ಮಂಡಳಿಯ 8 ಜನ ನಿರ್ದೇಶಕರುಗಳ ವಿವರಣೆಯನ್ನು ಕೂಲಂಕುಶವಾಗಿ ಪರಿಶೀಲಿಸಲಾಯಿತು. ಸಂಘದ ಕಾರ್ಯ ನಿರ್ವಹಣೆ ಬಗ್ಗೆ ಈ ಕೆಳಕಂಡ ಅಂಶಗಳು ಕಂಡುಬರುತ್ತದೆ.

1. ಸಂಘದ ಲೆಕ್ಕ ಪರಿಶೋಧನೆಯು 1991-1992 ರಿಂದ 1998-1999ನೇ ಸಾಲುಗಳವರೆಗೆ ನಡೆದಿದ್ದು, ಈ ಅವಧಿಯಲ್ಲಿ ಯಾವುದೇ ವ್ಯವಹಾರ ಮಾಡಿರುವುದಿಲ್ಲವೆಂದು ವರದಿಯಾಗಿರುತ್ತದೆ.
2. ಸಂಘದ ಕಾರ್ಯಕಾರಿ ಮಂಡಳಿಯು 1996-1997 ರಿಂದ 1998-1999ನೇ ಸಾಲುಗಳಲ್ಲಿ ಯಾವುದೇ ವ್ಯವಹಾರ ಮಾಡದೇ ತಟಸ್ಥವಾಗಿರುತ್ತದೆ ಎಂದು ಲೆಕ್ಕಪರಿಶೋಧಕರು ಗಮನಿಸಿದ್ದು, ಈ ಸಂಘವನ್ನು ಖೈದು ಮಾಡುವುದು ಸೂಕ್ತವೆಂದು ಅಭಿಪ್ರಾಯಪಟ್ಟಿರುತ್ತಾರೆ.
3. ಸಂಘದ ಬಹುತೇಕ ಸದಸ್ಯರುಗಳು ಏರೋನಾಟಿಕಲ್ ಡೆವಲಪ್‌ಮೆಂಟ್ ಏಜೆನ್ಸಿ- ಎಡಿಎ ಸಂಸ್ಥೆಯ ನೌಕರರುಗಳಾಗಿದ್ದು, 1998-1990ನೇ ಸಾಲಿನಲ್ಲಿ ಕಾನೂನುಬಾಹಿರವಾಗಿ ಸದಸ್ಯರಾಗಿ ಸಂಘದ ಆಡಳಿತವನ್ನು ತಮ್ಮ ಅಧೀನಕ್ಕೆ ತೆಗೆದುಕೊಂಡಿರುತ್ತಾರೆ.

4. ತದನಂತರ 1999-2000 ರಿಂದ 2003-2004ನೇ ಸಾಲಿನವರೆಗೂ ಸಂಘದ ಲೆಕ್ಕ ಪರಿಶೋಧನೆಯಾಗಿದ್ದು, ಈ ಸಂಘವನ್ನು 'ಡಿ' ತರಗತಿ ಎಂದು ವರ್ಗೀಕರಿಸಲಾಗಿದೆ.
5. ಸಂಘದ ಹಿಂದಿನ ಆಡಳಿತ ಮಂಡಳಿಯು ಬಡಾವಣೆ ರಚನೆ ಮಾಡುವ ಉದ್ದೇಶದಿಂದ ಶ್ರೀ ವೆಂಕಟೇಶ್ವರ ಲ್ಯಾಂಡ್ ಡೆವಲಪರ್ಸ್ ಇವರೊಂದಿಗೆ ದಿನಾಂಕ:11.07.1999ರಂದು ಕರಾರು ಮಾಡಿಕೊಂಡಿದ್ದು, ಸದಸ್ಯರಿಂದ 2002-2003ನೇ ಸಾಲಿನ ಅಂತ್ಯಕ್ಕೆ ಒಟ್ಟು ರೂ.3.19.76.607/- ನಿವೇಶನ ಠೇವಣಿ ಸಂಗ್ರಹಿಸಿದ್ದು, ಮೇಲ್ಕಂಡ ಡೆವಲಪರ್ಸ್‌ಗೆ ರೂ.3,20,07,103/- ಪಾವತಿಸಲಾಗಿದೆ.
6. ಸದರಿ ಶ್ರೀ ವೆಂಕಟೇಶ್ವರ ಲ್ಯಾಂಡ್ ಡೆವಲಪರ್ಸ್ ಈ ಸಂಸ್ಥೆಯು ಬೆಂಗಳೂರು ದಕ್ಷಿಣ ತಾಲ್ಲೂಕು ಥಣೀಸಂದ್ರ ಗ್ರಾಮದಲ್ಲಿ ಜಮೀನು ಪಡೆಯುವ ಉದ್ದೇಶದಿಂದ ಭೂ ಮಾಲೀಕರ ಜೊತೆ ಕರಾರು ಮಾಡಿಕೊಂಡಿದ್ದು, ಆದರೆ ಸದರಿ ಜಮೀನನ್ನು ಬಿಡಿಎಯು ಸಮಾನಾಂತರ ಭೂಸ್ವಾಧೀನ ಪ್ರಕ್ರಿಯೆ ರೀತ್ಯಾ ಈ ಜಮೀನನ್ನು ಸ್ವಾಧೀನ ಪಡಿಸಿಕೊಳ್ಳಲು ಕಲಂ 4(1)ರ ರೀತ್ಯಾ ಅಧಿಸೂಚನೆ ಹೊರಡಿಸಿದ್ದು, ಈ ಹಿನ್ನೆಲೆಯಲ್ಲಿ ಸಂಘದ ಹಿಂದಿನ ಆಡಳಿತ ಮಂಡಳಿಯು ಮೇಲ್ಕಂಡ ಡೆವಲಪರ್ಸ್ ಜೊತೆ ದಿನಾಂಕ:13.03.2003 ರಂದು ಪರಿಷ್ಕೃತ ಕರಾರು ಮಾಡಿಕೊಂಡು, ಮೇಲ್ಕಂಡ ಮುಂಗಡ ಹಣ ಮತ್ತು ಪರಿಹಾರ ಸೇರಿದಂತೆ ಒಟ್ಟು ರೂ.4,10,00,000-00 ಗಳನ್ನು ವಾಪಸ್ಸು ಪಡೆಯಲು ಒಪ್ಪಂದ ಮಾಡಿಕೊಂಡಿರುತ್ತದೆ. ಈ ಪೈಕಿ 2003-2004ನೇ ಸಾಲಿನಲ್ಲಿ ಸಂಘದ ಹಿಂದಿನ ಆಡಳಿತ ಮಂಡಳಿಯು ಅಭಿವೃದ್ಧಿದಾರರಿಂದ ರೂ.39.56 ಲಕ್ಷಗಳನ್ನು ಹಿಂದಕ್ಕೆ ಪಡೆದಿದ್ದು, ಸದರಿ ಸಾಲಿನಲ್ಲಿ ಸಂಘದ ಸದಸ್ಯರಿಗೆ ರೂ.38.56 ಲಕ್ಷ ನಿವೇಶನ ಠೇವಣಿಯನ್ನು ಹಿಂದಿರುಗಿಸಿರುತ್ತದೆ. ಆ ಮೂಲಕ ಸಂಘವು ಬಡಾವಣೆ ರಚಿಸಿ ಸದಸ್ಯರಿಗೆ ನಿವೇಶನ ಹಂಚಿಕೆ ಮಾಡುವ ಅವಕಾಶವನ್ನು ಕಳೆದುಕೊಂಡಂತಾಗಿದೆ.
7. ಮೇಲ್ಕಂಡ ಡೆವಲಪರ್ ರವರು ಈಗಾಗಲೇ ನೇರವಾಗಿ ಸಂಘದ ಸುಮಾರು 56 ಜನ ಸದಸ್ಯರಿಗೆ ಅವರ ನಿವೇಶನ ಠೇವಣಿ ಮೊಬಲಗನ್ನು ಹಿಂತಿರುಗಿಸಿರುವುದು ಕಂಡುಬರುತ್ತದೆ. ಉಳಿದ ಸದಸ್ಯರಿಗೂ ಸಹ ನಿವೇಶನ ಠೇವಣಿಯನ್ನು ಹಿಂದಿರುಗಿಸಲು ಬಾಕಿ ಇರುತ್ತದೆ.
8. ಸಂಘದಲ್ಲಿ 199 ಜನ ಸದಸ್ಯರಿದ್ದು ಈ ಪೈಕಿ 36 ಜನ ಸದಸ್ಯರ ವಿಳಾಸ ಲಭ್ಯವಿರುವುದಿಲ್ಲ. ಉಳಿದ 163 ಜನ ಸದಸ್ಯರ ಪೈಕಿ ಹಲವು ಸದಸ್ಯರ ಪೂರ್ಣ ವಿಳಾಸ ಲಭ್ಯವಿರುವುದಿಲ್ಲ. ಸಂಘದ ಸದಸ್ಯರ ಪೈಕಿ ಕೇವಲ 3 ಜನರು ಮಾತ್ರ ಸಂಘದ ಕಾರ್ಯವ್ಯಾಪ್ತಿಯಲ್ಲಿ ವಾಸವಾಗಿದ್ದು, ಕೆಲವರು ಹೊರ ರಾಜ್ಯಗಳಲ್ಲಿ ಅಂದರೆ ಕಲ್ಕತ್ತ, ತಮಿಳುನಾಡು, ಹೊಸೂರು, ಮುಧುರೈ ಹಾಗೂ ಪಾಟ್ನಾ ಗಳಲ್ಲಿ ವಾಸವಾಗಿರುತ್ತಾರೆ. ಆ ಮೂಲಕ ಸಂಘದ ಆಡಳಿತ ಮಂಡಳಿಯು ಕಾನೂನುಬಾಹಿರವಾಗಿ ಸದಸ್ಯತ್ವ ನೀಡಿರುವುದು ಕಂಡುಬರುತ್ತದೆ.
9. ಸಂಘವು ಅಭಿವೃದ್ಧಿದಾರರಿಂದ ಸಂಪೂರ್ಣವಾಗಿ ಮುಂಗಡವನ್ನು ವಾಪಸ್ಸು ಪಡೆಯದೇ ಸಂಘದಲ್ಲಿ ಸಿಬ್ಬಂದಿ ಸಂಬಳ, ಕಟ್ಟಡಬಾಡಿಗೆ ನೀಡಲು ಹಾಗೂ ಸರ್ವ ಸದಸ್ಯರ ಸಭೆ, ಆಡಳಿತ ಮಂಡಳಿ ಚುನಾವಣೆ, ದಾವೆಗಳನ್ನು ನಡೆಸಲು ಅಥವಾ ಸಂಘದ ಯಾವುದೇ ವ್ಯವಹಾರ ನಡೆಸಲು ಸಂಘದಲ್ಲಿ ಹಣಕಾಸು ಇಲ್ಲದೇ ಸಂಘವು ಸ್ಥಗಿತ ಸ್ಥಿತಿಗೆ ತಲುಪಿದ್ದು, ಸಂಘವು ತನ್ನ ಉಪನಿಯಮಗಳ ಉದ್ದೇಶಗಳನ್ನು ಈಡೇರಿಸಲು ಪರಿಸ್ಥಿತಿ ಕಂಡುಬರುತ್ತಿಲ್ಲ.
10. ಸಂಘವು 1999-2000 ರಿಂದ 2003-2004ನೇ ಸಾಲುಗಳ ವರೆಗೆ ಈ ಕೆಳಕಂಡಂತೆ ನಷ್ಟವನ್ನು ಅನುಭವಿಸಿರುತ್ತದೆ.

| | | |
|---|---|---|
| 1. | 1999-2000 | ರೂ.36,092-00 |
| 2. | 2000-2001 | ರೂ.1,00,305-00 |
| 3. | 2001-2002 | ರೂ.17,545-00 |
| 4. | 2002-2003 | ರೂ.20,154-00 |
| 5. | 2003-2004 | ರೂ.33,688-00 |
| 6. | 2004-2005 | ರೂ.9,973-00 |

ಸಂಘದ ಆರ್ಥಿಕ ಪರಿಸ್ಥಿತಿಯನ್ನು ಗಮನಿಸಿದಾಗ, ಈ ಸಂಘವು ಸದಸ್ಯರಿಗೆ ಹೊರೆಯಾಗುತ್ತಿರುವುದು ಸ್ಪಷ್ಟವಾಗಿ ಕಂಡುಬರುತ್ತಿದೆ.
11. ಸಂಘದ ಆಡಳಿತ ಮಂಡಳಿ ಸದಸ್ಯರು ಮತ್ತು ಇತರೆ ಸದಸ್ಯರನ್ನು ದಿನಾಂಕ:20.07.2006ರಂದು ಸಭೆ ಕರೆದು ಸಂಘದ ಸಮಸ್ಯೆ ಬಗೆಹರಿಸಲು ಎಷ್ಟೇ ಪ್ರಯತ್ನ ಪಟ್ಟರೂ ಸಹ ಸದಸ್ಯರು ತಮಗೆ ನಿವೇಶನವನ್ನು ಕೊಟ್ಟೇ ತೀರಬೇಕೆಂದು ಹಠ ಮಾಡಿದ ಕಾರಣ ಸದರಿ ಪ್ರಯತ್ನವೂ ಸಹ ಫಲಕಾರಿಯಾಗಿರುವುದಿಲ್ಲ.
12. ಸಂಘವು ಸಹಕಾರ ಸಂಘಗಳ ನಿಬಂಧಕರು, ಗೃಹ ನಿರ್ಮಾಣ ಸಹಕಾರ ಸಂಘಗಳಿಗೆ ರೂಪಿಸಿರುವ ಮಾದರಿ ಉಪನಿಯಮಗಳನ್ನು ಅಳವಡಿಸಿಕೊಂಡಿರುವುದಿಲ್ಲ.

ಮೇಲಿನ ಎಲ್ಲಾ ಅಂಶಗಳನ್ನು ಅವಲೋಕಿಸಿದಾಗ ಸಂಘವು ನೋಂದಣಿಯಾದ ಧ್ಯೇಯೋದ್ದೇಶಗಳನ್ನು ಈಡೇರಿಸಲು ಅದರಲ್ಲೂ ಮುಖ್ಯವಾಗಿ ತನ್ನ ಸದಸ್ಯರಿಗೆ ನಿವೇಶನ ನೀಡುವ ಉದ್ದೇಶದಿಂದ ಡೆವಲಪರ್‌ರೊಂದಿಗೆ ಸರಿಯಾದ ಕರಾರು ಮಾಡಿಕೊಳ್ಳದೇ, ಮುಂದೆ ತಗಲಬಹುದಾದ ತೊಡಕುಗಳ ಬಗ್ಗೆ ಆಲೋಚಿಸದೇ ಡೆವಲಪರಿಗೆ ಹಣ ಪಾವತಿಸಿದ ನಂತರ ಹಣ ಹಿಂಪಡೆಯಲು ಮತ್ತೊಂದು ಕರಾರು ಮಾಡಿಕೊಂಡು ಗೊಂದಲಮಯ ವಾತಾವರಣ ಸೃಷ್ಟಿಸಿ ಸಂಘದ ಮೂಲ ಉದ್ದೇಶವನ್ನು ಈಡೇರಿಸಲು ವಿಫಲವಾಗಿರುತ್ತದೆ. ಆ ಮೂಲಕ ಸಹಕಾರ ಸಂಘಗಳ ಕಾಯ್ದೆ ಕಲಂ 72(2)ರಲ್ಲಿ ತಿಳಿಸಿರುವಂತೆ ಸಂಘವು ನೋಂದಣಿಯಾದ ಉದ್ದೇಶವನ್ನು ಈಡೇರಿಸಲು ವಿಫಲವಾದ ಈ ಹಿನ್ನೆಲೆಯಲ್ಲಿ ಈ ಸಂಘವನ್ನು ಮುಂದುವರಿಸುವುದು ಸೂಕ್ತವಲ್ಲವೆಂಬುದು ಮನವರಿಕೆಯಾಗಿದೆ. ಸಂಘದಲ್ಲಿ ಅರ್ಹ ಸದಸ್ಯರು ಇಲ್ಲದೇ ಇರುವುದು, ಆರ್ಥಿಕವಾಗಿ ದುರ್ಬಲವಾಗಿರುವುದು. ಆಡಳಿತ ಮಂಡಳಿಯ ಸದಸ್ಯರು ಹಾಗೂ ಪದಾಧಿಕಾರಿಗಳು ಮತ್ತು ಸಂಘದ ಸದಸ್ಯರಲ್ಲಿ ಗುಂಪುಗಾರಿಕೆ, ಒಳಜಗಳ, ಇತ್ಯಾದಿ ಕಾರಣಗಳಿಂದಾಗಿ ಸಂಘದ ವ್ಯವಹಾರವು ಸ್ಥಗಿತಗೊಂಡಿದ್ದು, ಈ ಎಲ್ಲಾ ಅಂಶಗಳನ್ನು ಪರಿಶೀಲಿಸಿದಾಗ, ಈ ಸಂಘವನ್ನು ಮುಂದುವರಿಸುವ ಬದಲು ಇದನ್ನು ಸಮಾಪನೆಗೊಳಿಸಿ, ಸಂಘಕ್ಕೆ ಸಮಾಪನಾಧಿಕಾರಿಯನ್ನು ನೇಮಕ ಮಾಡುವುದು ಸೂಕ್ತವೆಂದು ತೀರ್ಮಾನಿಸಿದೆ.

ಅದರಂತೆ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

## ಆದೇಶ

ಪ್ರಸ್ತಾವನೆಯಲ್ಲಿ ವಿವರಿಸಿರುವ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಹಾಗೂ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 72(2) ಮತ್ತು ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ/ 69/ ಸಿಎಲ್ಎಂ/ 2001, ದಿನಾಂಕ:21.11.2001ರ ರೀತ್ಯಾ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಟಿ.ವಿ ನರಸಿಂಹಮೂರ್ತಿ, ಸಹಕಾರ ಸಂಘಗಳ ಉಪ ನಿಬಂಧಕರು-1, ಬೆಂಗಳೂರು ನಗರ ಜಿಲ್ಲೆ ಆದ ನಾನು ಶ್ರೀ ವೆಂಕಟೇಶ್ವರ ಗೃಹ ನಿರ್ಮಾಣ

ಸಹಕಾರ ಸಂಘ ನಿಯಮಿತ, ರಾಜಾಜಿನಗರ, ಬೆಂಗಳೂರು-560 010, ಈ ಸಹಕಾರ ಸಂಘವನ್ನು ಈ ಕೂಡಲೇ ಜಾರಿಗೆ ಬರುವಂತೆ ಸಮಾಪನೆಗೊಳಿಸಿ ಈ ಮೂಲಕ ಆದೇಶಿಸಿರುತ್ತೇನೆ ಹಾಗೂ ಸಹಕಾರ ಸಂಘಗಳ ಕಾಯ್ದೆಯ ಕಲಂ 73 ರನ್ವಯ ಅಧೀಕ್ಷಕರು, ಸಹಕಾರ ಸಂಘಗಳ ಉಪ ನಿಬಂಧಕರು-1 ರವರ ಕಛೇರಿ, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು-03 ಇವರನ್ನು ಸದರಿ ಸಹಕಾರ ಸಂಘದ ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಿ ಈ ಮೂಲಕ ಆದೇಶಿಸಿರುತ್ತೇನೆ. ಸಮಾಪನಾಧಿಕಾರಿಯವರು ಮೇಲ್ಕಂಡ ಸಹಕಾರ ಸಂಘದ ಪ್ರಭಾರವನ್ನು ಕೂಡಲೇ ವಹಿಸಿಕೊಂಡು, ದಿನಾಂಕ:13.03.2003ರ ಕರಾರಿನ ರೀತ್ಯಾ ಅಭಿವೃದ್ಧಿದಾರರಿಂದ ಸಂಘಕ್ಕೆ ಬರಬೇಕಾದ ಮೊಬಲಗನ್ನು ಅಭಿವೃದ್ಧಿದಾರರಿಂದ ಹಿಂದಕ್ಕೆ ಪಡೆದು ಸಂಘವು ತನ್ನ ಸದಸ್ಯರಿಂದ ಪಡೆದಿರುವ ನಿವೇಶನ ಠೇವಣಿ ಮೊಬಲಗನ್ನು ಸಂಬಂಧಪಟ್ಟ ಸದಸ್ಯರಿಗೆ ನಿಯಮಾನುಸಾರ ಹಿಂತಿರುಗಿಸಲು ಕೂಡಲೇ ಸೂಕ್ತ ಕ್ರಮಕೈಗೊಳ್ಳತಕ್ಕದ್ದು. ಹಾಗೂ ಸಂಘದ ಸಮಾಪನಾ ಕಾರ್ಯವನ್ನು ತೀವ್ರಗತಿಯಲ್ಲಿ ಪೂರ್ಣಗೊಳಿಸಿ ಸಂಘದ ನೋಂದಣಿಯನ್ನು ರದ್ದುಪಡಿಸಲು ಆದಷ್ಟು ಬೇಗ ಪ್ರಸ್ತಾವೆಯನ್ನು ಈ ಕಛೇರಿಗೆ ಸಲ್ಲಿಸುವಂತೆ ಈ ಮೂಲಕ ಆದೇಶಿಸಿರುತ್ತೇನೆ.

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಹಾಗೂ ಕಛೇರಿ ಮುದ್ರೆಯೊಂದಿಗೆ ಈ ದಿನ ಅಂದರೆ ದಿನಾಂಕ:10.10.2006 ರಂದು ನೀಡಿರುತ್ತೇನೆ.

**ಟಿ.ವಿ. ನರಸಿಂಹಮೂರ್ತಿ**
ಸಹಕಾರ ಸಂಘಗಳ ಉಪ ನಿಬಂಧಕರು-1,
ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು.

ಪಿ.ಆರ್.1525

## COMMERCIAL TAXES DEPARTMENT

## PROCEEDINGS OF THE COMMISSIONER OF COMMERCIAL TAXES, (KARNATAKA), BANGALORE UNDER SECTION 59(4) OF THE KARNATAKA, VALUE ADDED TAX ACT, 2003

**Sub:** KVAT Act 2003- Clarification under Section 59(4) regarding rate of tax applicable on "single moulded plastic footwear".

**Ref:** Application Dated:08.05.2006 of M/s Sterling Sales Corporation, No.4/10, Bommanahalli, Hosur Main Road, Bangalore-560 068.

In his application cited at reference above, the applicant has sought clarification regarding rate of tax applicable on 'single moulded plastic footwear'.

(2) Section 59(4) of the Karnataka Value Added Tax Act, 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purposes of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

(3) Hence the following clarification is issued.

**Clarification No. CLR CR 50/ 06-07, Dated:28th September, 2006**

It is hereby clarified that:

(i) 'Moulded plastic footwear' fully made of plastic and of single mould taxable at 4% under entry Sl.No.64 of Third schedule to the Karnataka Value Added Tax Act, 2003;

(ii) "Single moulded plastic footwear fully made of plastic', costing less than hundred rupees per pair is exempt from 10.05.2006 in terms of the Notification No.FD 121 CSL 2006(II), Dated:10.05.2006 issued under Section 5(1) of the Karnataka Value Added Tax Act, 2003.

**B.A. HARISH GOWDA**
Commissioner of Commercial Taxes,
(Karnataka), Bangalore.

PR-1526

## ಜಿಲ್ಲಾಧಿಕಾರಿಗಳವರ ಕಛೇರಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು

## ತಿದ್ದುಪಡಿ ಆದೇಶ

## ನಂ.ಎಲ್ಎನ್‌ಡಿ (ಹೊ) ಸಿಆರ್.205/ 2006-07, ದಿನಾಂಕ:17ನೇ ಅಕ್ಟೋಬರ್, 2006

ದಿನಾಂಕ: 22.06.2006ರ ಕರ್ನಾಟಕ ರಾಜ್ಯ ಪತ್ರದ ಭಾಗ-3ರ ಪುಟಸಂಖ್ಯೆ 1577 (ಪಿ.ಆರ್.919) ರಲ್ಲಿ ಪ್ರಕಟವಾಗಿರುವ ಹೊಸಕೋಟೆ ತಾಲ್ಲೂಕು, ಸೂಲಿಬೆಲೆ ಹೋಬಳಿ, ಎತ್ತಿನೊಡೇರಪುರ ಗ್ರಾಮದ ಸಾರ್ವಜನಿಕ ಹಕ್ಕುಗಳನ್ನು ಕೊನೆಗೊಳಿಸುವ ಬಗ್ಗೆ, ಕರ್ನಾಟಕ ಭೂ ಕಂದಾಯ ಕಾಯ್ದೆ 1964ರ ಕಲಂ 68(1) ಅಡಿ ನಮೂನೆ 27 ರಲ್ಲಿ ಪ್ರಕಟಿಸಿರುವ, ಪ್ರಕಟಣೆಯಲ್ಲಿ ಸದರಿ ಸಾರ್ವಜನಿಕ ರಸ್ತೆಯ ಚೆಕ್ಕುಬಂದಿ ಮತ್ತು ಅನುಸೂಚಿಗಳಲ್ಲಿನ ವಿವರಣೆಗಳಿಗೆ ಬದಲಾಗಿ ಈ ಕೆಳಕಂಡಂತೆ ಓದಿಕೊಳ್ಳತಕ್ಕದ್ದು. ಉಳಿದಂತೆ ಯಾವುದೇ ಬದಲಾವಣೆ ಇರುವುದಿಲ್ಲ.

**ಅನುಸೂಚಿ**

| | |
|---|---|
| 1. ಗ್ರಾಮ | : ಎತ್ತಿನವಡೇರಪುರ. |
| 2. ತಾಲ್ಲೂಕು | : ಹೊಸಕೋಟೆ. |
| 3. ಜಿಲ್ಲೆ | : ಬೆಂಗಳೂರು ಗ್ರಾಮಾಂತರ ಜಿಲ್ಲೆ. |
| 4. ಸ.ನಂ. | : 15ರಲ್ಲಿನ ಹಾದುಹೋಗುವ ರಸ್ತೆ. |
| 5. ವಿಸ್ತೀರ್ಣ | : ಎಂಟು (8) ಅಡಿ ಕಾಲು ದಾರಿ. |

**ಚಿಕ್ಕುಬಂದಿ**

**ಪೂರ್ವಕ್ಕೆ:** ಸ.ನಂ. 15 ಚಂದ್ರಶೇಖರ ಗೌಡ (ಉ) ರೆಡ್ಡಪ್ಪನವರ ಜಮೀನು.

**ಪಶ್ಚಿಮಕ್ಕೆ:** ಸ.ನಂ.15 ಚಂದ್ರಶೇಖರ ಗೌಡ (ಉ) ರೆಡ್ಡಪ್ಪನವರ ಜಮೀನು.

**ಉತ್ತರಕ್ಕೆ:** ಸ.ನಂ.14 ಮತ್ತು 13ರ ಸ್ಮಶಾನಕ್ಕೆ ಹೋಗುವ ದಾರಿ.

**ದಕ್ಷಿಣಕ್ಕೆ:** ಹನುಮಕ್ಕ ಕೋಂ ಸೀತಪ್ಪ ನವರ ಮನೆ ಮತ್ತು ಗ್ರಾಮ ಕಾಣದ ಜಮೀನು.

ಈ ಮಧ್ಯೆ ನಕಾಶೆಯಂತೆ ಇರುವ ಸ್ಮಶಾನಕ್ಕೆ ಹಾದು ಹೋಗುವ "8" ಅಡಿ ಕಾಲು ದಾರಿ.

ಜಿಲ್ಲಾಧಿಕಾರಿಗಳು,
ಬೆಂಗಳೂರು ಗ್ರಾಮಾಂತರ ಜಿಲ್ಲೆ,
ಬೆಂಗಳೂರು.

ಪಿ.ಆರ್.1528

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ

## ಅಧಿಕೃತ ಜ್ಞಾಪನ

### ಸಂಖ್ಯೆ: ಸಿಆಸುಇ 82 ಶಿವಾನೀ 2006, ದಿನಾಂಕ:12ನೇ ಅಕ್ಟೋಬರ್, 2006

**ವಿಷಯ:** ಸಚಿವಾಲಯದ ಇಲಾಖಾ ಪ್ರಧಾನ ಕಾರ್ಯದರ್ಶಿಗಳು: ಕಾರ್ಯದರ್ಶಿಗಳು ಹೊಸ ವಾಹನ ಖರೀದಿಸುವ ಬಗ್ಗೆ ಸೂಚನೆಗಳು.

**ಉಲ್ಲೇಖ:** (1) ಅಧಿಕೃತ ಜ್ಞಾಪನ ಸಂಖ್ಯೆ: ಸಿಆಸುಇ 87 ಶಿವಾನೀ 2000, ದಿನಾಂಕ:29.08.2000.

(2) ಸುತ್ತೋಲೆ ಸಂಖ್ಯೆ: ಸಿಆಸುಇ 19 ಶಿವಾನೀ 2005, ದಿನಾಂಕ:03.06.2005.

ಮೇಲೆ ಓದಲಾದ ಕ್ರಮಸಂಖ್ಯೆ: (1)ರ ಅಧಿಕೃತ ಜ್ಞಾಪನದಲ್ಲಿ ಸರ್ಕಾರದ ಕಾರ್ಯದರ್ಶಿಗಳು ಹಾಗೂ ಇಲಾಖಾ ಮುಖ್ಯಸ್ಥರುಗಳು ಇತರ ಸೂಚನೆಗಳೊಂದಿಗೆ ರೂ.4.25 ಲಕ್ಷ ಗರಿಷ್ಟ ಮಿತಿಯೊಳಗೆ ಅಂಬಾಸಿಡರ್ ವಾಹನವನ್ನು ಖರೀದಿಸಲು ಅವಕಾಶ ಕಲ್ಪಿಸಲಾಗಿತ್ತು. ಮೇಲೆ ಓದಲಾದ ಕ್ರಮಸಂಖ್ಯೆ: (2)ರಲ್ಲಿನ ಸುತ್ತೋಲೆಯಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು: ಕಾರ್ಯದರ್ಶಿಗಳು: ಇಲಾಖಾ ಮುಖ್ಯಸ್ಥರುಗಳಿಗೆ ವಾಹನ ಖರೀದಿಸುವಾಗ ಇಂಧನ ಉಳಿತಾಯ ಹೊಂದಿರುವ ಮಾರುತಿ ಎಸ್ಟೀಮ್ ವಾಹನಗಳನ್ನು ಡಿ.ಜಿ.ಎಸ್.ಡಿ. ದರಗಳಿಗೆ ಒಳಪಟ್ಟು ಖರೀದಿಸಲು ಅನುಮತಿ ನೀಡಲಾಗಿತ್ತು.

ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು: ಕಾರ್ಯದರ್ಶಿಗಳಿಂದ ಪ್ರಸ್ತುತ ಮಾರುಕಟ್ಟೆಯಲ್ಲಿ ಇಂಧನ ಮಿತವ್ಯಯ ಹಾಗೂ ನಿರ್ವಹಣಾ ವೆಚ್ಚ ಕಡಿಮೆ ಹೊಂದಿರುವ ವಿವಿಧ ಮಾದರಿಯ ವಾಹನಗಳು ಲಭ್ಯವಿದ್ದು ಈ ವಾಹನಗಳನ್ನು ಖರೀದಿಸಲು ಅನುವಾಗುವಂತೆ ಪ್ರಸ್ತುತ ಇರುವ ರೂ.4.25 ಲಕ್ಷಗಳ ಆರ್ಥಿಕ ಮಿತಿಯನ್ನು ಪರಿಷ್ಕರಿಸಲು ಕೋರಿಕೆಗಳು ಬಂದಿರುತ್ತವೆ.

ಸರ್ಕಾರದ ಇಲಾಖಾ ಪ್ರಧಾನ ಕಾರ್ಯದರ್ಶಿಗಳು: ಕಾರ್ಯದರ್ಶಿಗಳಿಗೆ ಹೊಸ ವಾಹನ ಖರೀದಿಗೆ ದರ ಪರಿಷ್ಕರಿಸುವ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿದ್ದು, ಪ್ರಸ್ತುತ ಇರುವ ರೂ.4.25 ಲಕ್ಷಗಳ ಆರ್ಥಿಕ ಮಿತಿಯನ್ನು ರೂ.6.50 ಲಕ್ಷ (ತೆರಿಗೆ ಹೊರತುಪಡಿಸಿ) ಗಳಿಗೆ ಪರಿಷ್ಕರಿಸಿದೆ.

ಹೊಸ ವಾಹನ ಖರೀದಿಸುವ ಸಂದರ್ಭದಲ್ಲಿ ಇಂಧನ ಮಿತವ್ಯಯ ಹಾಗೂ ನಿರ್ವಹಣಾ ವೆಚ್ಚ ಕಡಿಮೆ ಹೊಂದಿರುವ ವಾಹನಗಳನ್ನು ಡಿ.ಜಿ.ಎಸ್.ಡಿ. ದರಗಳಿಗೆ ಒಳಪಟ್ಟು ಖರೀದಿಸುವುದು.

**ಎಸ್. ತಿಪ್ಪೇಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ರಾಜ್ಯ ಶಿಷ್ಟಾಚಾರ).

ಪಿ.ಆರ್.1530

## ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆ, ದಾವಣಗೆರೆ

## ಪ್ರಕಟಣೆ

### ಸಂಖ್ಯೆ: ಡಿಬಿಸಿಎಂ:ಶಿವೇ: ವಿನಿ:53: 2006-07, ದಿನಾಂಕ:6ನೇ ಅಕ್ಟೋಬರ್, 2006

**ವಿಷಯ:** 2006-07ನೇ ಸಾಲಿನಲ್ಲಿ ಆಡಳಿತ ನ್ಯಾಯಾಧಿಕರಣದಲ್ಲಿ ಹಿಂದುಳಿದ ವರ್ಗಗಳ ಜನಾಂಗಕ್ಕೆ ಸೇರಿದ ಕಾನೂನು ಪದವೀಧರರಿಗೆ ತರಬೇತಿ ನೀಡುವ ಬಗ್ಗೆ.

**ಉಲ್ಲೇಖ:** (1) ಸರ್ಕಾರದ ಆದೇಶ ಸಂಖ್ಯೆ:SWL:68:SW:89, ದಿನಾಂಕ:02.11.1990.

(2) ಸರ್ಕಾರದ ಆದೇಶ ಸಂಖ್ಯೆ: ಸಕಇ: 205: ಬಿಎಂಎಸ್: 1982, ದಿನಾಂಕ:29.10.1998.

(3) ಸರ್ಕಾರದ ಆದೇಶ ಸಂಖ್ಯೆ: ಸಕಇ: 445: ಬಿಎಂಎಸ್: 2005, ಬೆಂಗಳೂರು, ದಿನಾಂಕ:01.12.2005.

2006-07ನೇ ಸಾಲಿನಲ್ಲಿ ಹಿಂದುಳಿದ ವರ್ಗಗಳ ಜನಾಂಗಕ್ಕೆ ಸೇರಿದ ದಾವಣಗೆರೆ ಜಿಲ್ಲೆಯಲ್ಲಿ ನಿರುದ್ಯೋಗಿ ಕಾನೂನು ಪದವೀಧರರಿಗೆ ಆಡಳಿತ ನ್ಯಾಯಾಧೀಕರಣದಲ್ಲಿ ತರಬೇತಿಯನ್ನು ನೀಡಲು ಅರ್ಹ ಅಭ್ಯರ್ಥಿಗಳಿಂದ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಇಲಾಖಾ ವತಿಯಿಂದ ಅರ್ಜಿಗಳನ್ನು ಆಹ್ವಾನಿಸಲಾಗಿದೆ. ತರಬೇತಿಗಾಗಿ ಅರ್ಜಿಯನ್ನು ಸಲ್ಲಿಸುವ ಅಭ್ಯರ್ಥಿಗಳು ಈ ಕೆಳಕಂಡ ನಿಬಂಧನೆಗಳಿಗೆ ಒಳಪಟ್ಟಿರಬೇಕು.

**ನಿಬಂಧನೆಗಳು:**

1. ಅಭ್ಯರ್ಥಿಯು ಹಿಂದುಳಿದ ವರ್ಗಗಳ ಜನಾಂಗಕ್ಕೆ ವರ್ಗ-1, 2(ಎ), 2(ಬಿ), 3(ಎ), 3(ಬಿ) ವರ್ಗಕ್ಕೆ ಸೇರಿದವರಾಗಿರಬೇಕು ಹಾಗೂ ಪ್ರಸಕ್ತ ಸಾಲಿನ ಜಾತಿ/ ಆದಾಯ ಪ್ರಮಾಣ ಪತ್ರವನ್ನು ಸಂಬಂಧಿಸಿದ ಅಧಿಕಾರಿಗಳಿಂದ ಪಡೆದು ದೃಢೀಕೃತ ಜೆರಾಕ್ಸ್ ಪ್ರತಿಯನ್ನು ಲಗತ್ತಿಸುವುದು.
2. ಪ್ರವರ್ಗ-1ಕ್ಕೆ ಸೇರಿದ ಅಭ್ಯರ್ಥಿಗಳಿಗೆ ಗರಿಷ್ಟ ವಯೋಮಿತಿ 31 ವರ್ಷಗಳು ಇತರೆ ಹಿಂದುಳಿದ ವರ್ಗಗಳ ಅಭ್ಯರ್ಥಿಗಳ ಗರಿಷ್ಟ ವಯೋಮಿತಿ 30 ವರ್ಷದೊಳಗಿರಬೇಕು.

3. ಅರ್ಜಿಯನ್ನು ಸ್ವೀಕರಿಸುವ ಕೊನೆಯ ದಿನಾಂಕಕ್ಕೆ ಅಭ್ಯರ್ಥಿಯು, ಅಡ್ವೋಕೇಟ್ ಆಗಿ ಕಾರ್ಯನಿರ್ವಹಿಸಲು ನಿಗದಿ ಪಡಿಸಲಾದ ಕಾನೂನು ಪರೀಕ್ಷೆಯಲ್ಲಿ ತೇರ್ಗಡೆಯಾಗಿ 02 ವರ್ಷಗಳ ಅವಧಿಯೊಳಗಿರುವವರು ಮಾತ್ರ ತರಬೇತಿಗೆ ಅರ್ಜಿಸಲ್ಲಿಸಲು ಅರ್ಹರಾಗಿರುತ್ತಾರೆ.
4. ಅರ್ಜಿಸಲ್ಲಿಸುವ ಅಭ್ಯರ್ಥಿಗಳು ನಿರುದ್ಯೋಗಿಗಳಾಗಿರಬೇಕು.
5. ವರ್ಗ-1ಕ್ಕೆ ಸೇರಿದ ಅಭ್ಯರ್ಥಿಗಳ ಹೊರತು ಪಡಿಸಿ ಉಳಿದ ಅಭ್ಯರ್ಥಿಗಳ ಕುಟುಂಬದ ವಾರ್ಷಿಕ ವರಮಾನ ರೂ.15,000-00ಕ್ಕೆ ಮೀರಿರಬಾರದು.
6. ತರಬೇತಿಯು 04 ವರ್ಷಗಳ ಅವಧಿಯಾಗಿದ್ದು, ಮಾಸಿಕ ರೂ.1000-00 ಗಳ ಶಿಷ್ಯವೇತನ ನೀಡುವುದು.
7. ಕಾನೂನು ತರಬೇತಿಗೆ ದಾವಣಗೆರೆ ಜಿಲ್ಲೆಯ 10 ಅಭ್ಯರ್ಥಿಗಳನ್ನು ಮಾತ್ರ ಆಯ್ಕೆ ಮಾಡಲಾಗುವುದು.
8. ತರಬೇತಿ ಅವಧಿಯ ಮಧ್ಯ ಭಾಗದಲ್ಲಿ ತರಬೇತಿಗೆ ಗೈರು ಹಾಜರಾದಲ್ಲಿ ಪಡೆಯಲಾಗಿರುವ ಶಿಷ್ಯ ವೇತನದ ಹಣವನ್ನು ಬಡ್ಡಿಯೊಂದಿಗೆ ಹಿಂದಿರುಗಿಸಬೇಕಾಗುವುದು.
9. ಅಭ್ಯರ್ಥಿಯು ತಮ್ಮ ಹೆಸರನ್ನು ಜಿಲ್ಲೆಯ ಹಾಗೂ ರಾಜ್ಯ ಬಾರ್ ಕೌನ್ಸಿಲ್‌ನಲ್ಲಿ ನೊಂದಾಯಿಸಿರಬೇಕು.
10. ಜಿಲ್ಲಾ ಪಬ್ಲಿಕ್ ಪ್ರಾಸಿಕ್ಯೂಟರ್, ಸರ್ಕಾರಿ ವಕೀಲರು ಅಥವಾ 20 ವರ್ಷಗಳ ವಕೀಲ ವೃತ್ತಿಯಲ್ಲಿ ಅನುಭವವುಳ್ಳ ಯಾವುದೇ ವಕೀಲರ ಅಧೀನದಲ್ಲಿ ತರಬೇತಿಗೆ ನಿಯೋಜಿಸಲಾಗುತ್ತದೆ.
11. ಅರ್ಜಿಯನ್ನು ಸ್ವೀಕರಿಸುವ ಕೊನೆಯ ದಿನಾಂಕ:25.10.2006.
12. ಅಪೂರ್ಣವಾದ ಹಾಗೂ ಕೊನೆಯ ದಿನಾಂಕದನಂತರ ಬಂದ ಅರ್ಜಿಗಳನ್ನು ಯಾವುದೇ ಮುನ್ಸೂಚನೆ ಇಲ್ಲದೆ ತಿರಸ್ಕರಿಸಲಾಗುವುದು.
13. ಅರ್ಜಿ ಸಲ್ಲಿಸುವ ಅಭ್ಯರ್ಥಿಗಳು ಬೇರೆ ಯಾವುದೇ ಇಲಾಖೆಯಿಂದ ತರಬೇತಿ ಪಡೆಯುತ್ತಿರಬಾರದು. ಹಾಗೂ ಶಿಷ್ಯವೇತನ ಪಡೆಯುತ್ತಿರಬಾರದು.

ಹೆಚ್ಚಿನ ವಿವರಗಳಿಗೆ ಹಾಗೂ ಅರ್ಜಿ ನಮೂನೆಯನ್ನು ಪಡೆಯುವ ಜಿಲ್ಲಾ ಅಧಿಕಾರಿಗಳು, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ, ದಾವಣಗೆರೆ ಇಲ್ಲಿ ಕಛೇರಿ ವೇಳೆಯಲ್ಲಿ ಸಂಪರ್ಕಿಸಬಹುದಾಗಿರುತ್ತದೆ.

**ವೈ.ಎಸ್. ನಿಂಗಪ್ಪ**
ಜಿಲ್ಲಾ ಅಧಿಕಾರಿಗಳು,
ಹಿಂದುಳಿದ ವರ್ಗಗಳ ಮತ್ತು
ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ, ದಾವಣಗೆರೆ.

ಪಿ.ಆರ್.1531

## ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆ, ದಾವಣಗೆರೆ

## ಪ್ರಕಟಣೆ

**ಸಂಖ್ಯೆ: ಡಿಬಿಸಿಎಂ:ಅಸಂ:ಶಿವೇ: ವಿನಿ:53: 2006-07, ದಿನಾಂಕ:6ನೇ ಅಕ್ಟೋಬರ್, 2006**

**ವಿಷಯ:** 2006-07ನೇ ಸಾಲಿನಲ್ಲಿ ಆಡಳಿತ ನ್ಯಾಯಾಧಿಕರಣದಲ್ಲಿ ಮತೀಯ ಅಲ್ಪಸಂಖ್ಯಾತರ ಜನಾಂಗಕ್ಕೆ ಸೇರಿದ ಕಾನೂನು ಪದವೀಧರರಿಗೆ ತರಬೇತಿ ನೀಡುವ ಬಗ್ಗೆ.

**ಉಲ್ಲೇಖ:** (1) ಸರ್ಕಾರದ ಆದೇಶ ಸಂಖ್ಯೆ:SWL:68:SW:89, ದಿನಾಂಕ:02.11.1990.
(2) ಸರ್ಕಾರದ ಆದೇಶ ಸಂಖ್ಯೆ: ಸಕಇ: 205: ಬಿಎಂಎಸ್: 1982, ದಿನಾಂಕ:29.10.1998.
(3) ಸರ್ಕಾರದ ಆದೇಶ ಸಂಖ್ಯೆ: ಸಕಇ: 445: ಬಿಎಂಎಸ್: 2005, ಬೆಂಗಳೂರು, ದಿನಾಂಕ:01.12.2005.

2006-07ನೇ ಸಾಲಿನಲ್ಲಿ ಮತೀಯ ಅಲ್ಪಸಂಖ್ಯಾತರ ಜನಾಂಗ ಬುದ್ಧ, ಮುಸ್ಲಿಂ, ಕ್ರಿಶ್ಚಿಯನ್, ಜೈನ್, ಪಾರ್ಸಿ, ಸಿಖ್, ಜನಾಂಗಕ್ಕೆ ಸೇರಿದ ದಾವಣಗೆರೆ ಜಿಲ್ಲೆಯ ಇಬ್ಬರು ನಿರುದ್ಯೋಗಿ ಕಾನೂನು ಪದವೀಧರರಿಗೆ ಆಡಳಿತ ನ್ಯಾಯಾಧೀಕರಣದಲ್ಲಿ ತರಬೇತಿಯನ್ನು ನೀಡಲು ಅರ್ಹ ಅಭ್ಯರ್ಥಿಗಳಿಂದ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಇಲಾಖಾ ವತಿಯಿಂದ ಅರ್ಜಿಗಳನ್ನು ಆಹ್ವಾನಿಸಲಾಗಿದೆ. ತರಬೇತಿಗಾಗಿ ಅರ್ಜಿಯನ್ನು ಸಲ್ಲಿಸುವ ಅಭ್ಯರ್ಥಿಗಳು ಈ ಕೆಳಕಂಡ ನಿಬಂಧನೆಗಳಿಗೆ ಒಳಪಟ್ಟಿರಬೇಕು.

**ನಿಬಂಧನೆಗಳು:**

1. ಅಭ್ಯರ್ಥಿಯು ಮತೀಯ ಅಲ್ಪಸಂಖ್ಯಾತರ ಸಮುದಾಯ ಬುದ್ಧ, ಮುಸ್ಲಿಂ, ಕ್ರಿಶ್ಚಿಯನ್, ಜೈನ್, ಪಾರ್ಸಿ, ಸಿಖ್, ಜನಾಂಗಕ್ಕೆ ಸೇರಿದವರಾಗಿರಬೇಕು ಹಾಗೂ ಪ್ರಸಕ್ತ ಸಾಲಿನ ಜಾತಿ/ ಆದಾಯ ಪ್ರಮಾಣ ಪತ್ರವನ್ನು ಸಂಬಂಧಿಸಿದ ಅಧಿಕಾರಿಗಳಿಂದ ಪಡೆದು ದೃಢೀಕೃತ ಜೆರಾಕ್ಸ್ ಪ್ರತಿಯನ್ನು ಲಗತ್ತಿಸುವುದು.
2. ಅಭ್ಯರ್ಥಿಗಳಿಗೆ ಗರಿಷ್ಠ ವಯೋಮಿತಿ 30 ವರ್ಷದೊಳಗಿರಬೇಕು.
3. ಅರ್ಜಿಯನ್ನು ಸ್ವೀಕರಿಸುವ ಕೊನೆಯ ದಿನಾಂಕಕ್ಕೆ ಅಭ್ಯರ್ಥಿಯು, ಅಡ್ವೋಕೇಟ್ ಆಗಿ ಕಾರ್ಯನಿರ್ವಹಿಸಲು ನಿಗದಿ ಪಡಿಸಲಾದ ಕಾನೂನು ಪರೀಕ್ಷೆಯಲ್ಲಿ ತೇರ್ಗಡೆಯಾಗಿ 02 ವರ್ಷಗಳ ಅವಧಿಯೊಳಗಿರುವವರು ಮಾತ್ರ ತರಬೇತಿಗೆ ಅರ್ಜಿಸಲ್ಲಿಸಲು ಅರ್ಹರಾಗಿರುತ್ತಾರೆ.
4. ಅರ್ಜಿಸಲ್ಲಿಸುವ ಅಭ್ಯರ್ಥಿಗಳು ನಿರುದ್ಯೋಗಿಗಳಾಗಿರಬೇಕು.
5. ವರ್ಗ-1ಕ್ಕೆ ಸೇರಿದ ಅಭ್ಯರ್ಥಿಗಳ ಹೊರತು ಪಡಿಸಿ ಉಳಿದ ಅಭ್ಯರ್ಥಿಗಳ ಕುಟುಂಬದ ವಾರ್ಷಿಕ ವರಮಾನ ರೂ.15,000-00ಕ್ಕೆ ಮೀರಿರಬಾರದು.
6. ತರಬೇತಿಯು 04 ವರ್ಷಗಳ ಅವಧಿಯಾಗಿದ್ದು, ಮಾಸಿಕ ರೂ.1000-00 ಗಳ ಶಿಷ್ಯವೇತನ ನೀಡುವುದು.
7. ಕಾನೂನು ತರಬೇತಿಗೆ ದಾವಣಗೆರೆ ಜಿಲ್ಲೆಯ 10 ಅಭ್ಯರ್ಥಿಗಳನ್ನು ಮಾತ್ರ ಆಯ್ಕೆ ಮಾಡಲಾಗುವುದು.
8. ತರಬೇತಿ ಅವಧಿಯ ಮಧ್ಯ ಭಾಗದಲ್ಲಿ ತರಬೇತಿಗೆ ಗೈರು ಹಾಜರಾದಲ್ಲಿ ಪಡೆಯಲಾಗಿರುವ ಶಿಷ್ಯ ವೇತನದ ಹಣವನ್ನು ಬಡ್ಡಿಯೊಂದಿಗೆ ಹಿಂದಿರುಗಿಸಬೇಕಾಗುವುದು.
9. ಅರ್ಜಿ ಸಲ್ಲಿಸುವ ಅಭ್ಯರ್ಥಿಗಳು ನಿರುದ್ಯೋಗಿಗಳಾಗಿರಬೇಕು.
10. ಜಿಲ್ಲಾ ಪಬ್ಲಿಕ್ ಪ್ರಾಸಿಕ್ಯೂಟರ್, ಸರ್ಕಾರಿ ವಕೀಲರು ಅಥವಾ 20 ವರ್ಷಗಳ ವಕೀಲ ವೃತ್ತಿಯಲ್ಲಿ ಅನುಭವವುಳ್ಳ ಯಾವುದೇ ವಕೀಲರ ಅಧೀನದಲ್ಲಿ ತರಬೇತಿಗೆ ನಿಯೋಜಿಸಲಾಗುತ್ತದೆ.

11. ಅರ್ಜಿಯನ್ನು ಸ್ವೀಕರಿಸುವ ಕೊನೆಯ ದಿನಾಂಕ:25.10.2006.
12. ಅಪೂರ್ಣವಾದ ಹಾಗೂ ಕೊನೆಯ ದಿನಾಂಕದನಂತರ ಬಂದ ಅರ್ಜಿಗಳನ್ನು ಯಾವುದೇ ಮುನ್ಸೂಚನೆ ಇಲ್ಲದೆ ತಿರಸ್ಕರಿಸಲಾಗುವುದು.
13. ಅರ್ಜಿ ಸಲ್ಲಿಸುವ ಅಭ್ಯರ್ಥಿಗಳು, ಬೇರೆ ಯಾವುದೇ ಇಲಾಖೆಯಿಂದ ತರಬೇತಿ ಪಡೆಯುತ್ತಿರಬಾರದು. ಹಾಗೂ ಶಿಷ್ಯವೇತನ ಪಡೆಯುತ್ತಿರಬಾರದು.

ಹೆಚ್ಚಿನ ವಿವರಗಳಿಗೆ ಹಾಗೂ ಅರ್ಜಿ ನಮೂನೆಯನ್ನು ಪಡೆಯುವ ಜಿಲ್ಲಾ ಅಧಿಕಾರಿಗಳು, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ, ದಾವಣಗೆರೆ ಇಲ್ಲಿ ಕಛೇರಿ ವೇಳೆಯಲ್ಲಿ ಸಂಪರ್ಕಿಸಬಹುದಾಗಿರುತ್ತದೆ.

**ವೈ.ಎಸ್. ನಿಂಗಪ್ಪ**
ಜಿಲ್ಲಾ ಅಧಿಕಾರಿಗಳು,
ಹಿಂದುಳಿದ ವರ್ಗಗಳ ಮತ್ತು
ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ, ದಾವಣಗೆರೆ.

ಪಿ.ಆರ್.1532

## ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಳ ಆಯೋಗ, ಬೆಂಗಳೂರು
## ನಂ.332, 2ನೇ ಮಹಡಿ, ದಾರುಸ್ ಸಲಾಂ ಕಟ್ಟಡ, ಕ್ವೀನ್ಸ್ ರಸ್ತೆ, ಬೆಂಗಳೂರು-52
## ಅಧಿಸೂಚನೆ
### ಸಂಖ್ಯೆ: ಕರಾಹಿಂವಆ/ ಮದೂವಿ-1/ ಸಿಆರ್-24/ 2005-06, ದಿನಾಂಕ:5ನೇ ಅಕ್ಟೋಬರ್, 2006

**ವಿಷಯ:** ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮಗಳು 2005ರ ಅಡಿಯಲ್ಲಿ ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಳ ಆಯೋಗದ ಕಾರ್ಯ ಚಟುವಟಿಕೆಗಳನ್ನು ಪ್ರಕಟಿಸುವ ಬಗ್ಗೆ.

**ಉಲ್ಲೇಖ:** (1) ಕೇಂದ್ರ ಸರ್ಕಾರದ ಮಾಹಿತಿ ಪಡೆಯಲು ಹಕ್ಕು ಕಾಯಿದೆ 2005ರ ಅಧಿನಿಯಮಗಳು ದಿನಾಂಕ:15.08.2005 (ಕೇಂದ್ರ ಕಾಯಿದೆ ಸಂಖ್ಯೆ 22)
(2) ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮಗಳು 2005 ದಿನಾಂಕ:11.10.2005.
(3) ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಳ ಆಯೋಗದ ಅಧಿನಿಯಮಗಳು 1995 (ಸಂಖ್ಯೆ 28).
(4) ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಳ ಆಯೋಗದ 130ನೇ ಸಭೆಯ ನಡಾವಳಿಗಳು.

**ಹಿನ್ನೆಲೆ:**

ಕರ್ನಾಟಕ ರಾಜ್ಯ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2005ರ ನಿಯಮ 4ರ ಅನುಸಾರ, ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಳ ಆಯೋಗದ ಕಾಯಿದೆ 1995ರನ್ವಯ ರೂಪಿಸಲಾಗಿರುವ ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಳ ಆಯೋಗದ ಅಧಿಕಾರಗಳು, ಕರ್ತವ್ಯಗಳು, ಪ್ರಕಾರ್ಯಗಳು ಮತ್ತಿತರ ಅಂಶಗಳ ಕುರಿತು ಮಾಹಿತಿ ಒದಗಿಸುವುದಕ್ಕೆ ಸಂಬಂಧಿಸಿದಂತೆ ಈ ಅಧಿಸೂಚನೆಯನ್ನು ಹೊರಡಿಸಲಾಗಿದೆ.

**ಉದ್ದೇಶಗಳು:**

ಕರ್ನಾಟಕ ರಾಜ್ಯ ಹಿಂದುಗಳಿದ ವರ್ಗಗಳ ಆಯೋಗಕ್ಕೆ ಸಂಬಂಧಿಸಿದ ಮಾಹಿತಿಗಳ ಒದಗಿಸುವಿಕೆಗೆ ಅವಕಾಶ, ಆಯೋಗದ ಕಾರ್ಯಗಳಿಗೆ ಹೊಣೆಗಾರಿಕೆ ಮತ್ತು ಪಾರದರ್ಶಕತೆ ತರುವುದು:

**ಆಯೋಗದ ಕುರಿತು ವಿವರಗಳು:**

ಪ್ರತಿ ರಾಜ್ಯದಲ್ಲಿ ಹಾಗೂ ಕೇಂದ್ರದಲ್ಲಿ ಒಂದು ಹಿಂದುಳಿದ ವರ್ಗಗಳ ಆಯೋಗವನ್ನು ರಚಿಸುವಂತೆ ಮಂಡಲ್ ವರದಿ ಮೇಲಿನ ಮೊಕದ್ದಮೆಯಲ್ಲಿ ಭಾರತದ ಸರ್ವೋಚ್ಚ ನ್ಯಾಯಾಲಯುವು ನೀಡಿದ ನಿರ್ದೇಶನದ ಮೇರೆಗೆ, ಉಲ್ಲೇಖ (3)ರಲ್ಲಿನ 1995ರ ಅಧಿನಿಯಮ (ರಾಜ್ಯ ಕಾಯಿದೆ 24)ರ ಪ್ರಕಾರ, ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಳ ಆಯೋಗವು, ಸರ್ಕಾರದ ಆದೇಶ, ಸಂಖ್ಯೆ: ಸಕಾಕ.80.ಬಿಸಿಎ. 92, ದಿನಾಂಕ:22.02.1993ರಲ್ಲಿ ರಚನೆಗೊಂಡಿರುತ್ತದೆ. ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಳ ಆಯೋಗದ 1995ರ ಕಾಯಿದೆಯು, ಕರ್ನಾಟಕ ರಾಜ್ಯ 28ನೇ ವಿಧೇಯಕ 1997ರಂತೆ ತಿದ್ದುಪಡಿಗೊಂಡು, ಸರ್ಕಾರದ ಆದೇಶ ಸಂಖ್ಯೆ: ಎಸ್‌ಡಬ್ಲ್ಯೂಡಿ: 164 ಬಿಸಿಎ 97 ದಿನಾಂಕ:29.11.1997ರ ಮೂಲಕ ದಿನಾಂಕ:01.12.1997 ರಿಂದ ಜಾರಿಗೆ ಬಂದಿರುತ್ತದೆ. ಅಂದಿನಿಂದ ಈ ಆಯೋಗವು ಒಂದು ಸ್ವಾಯತ್ತ ಸಂಸ್ಥೆಯಾಗಿರುವುದಲ್ಲದೆ ಶಾಸನಬದ್ಧ ಸಂಸ್ಥೆಯಾಗಿಯೂ ಕಾರ್ಯನಿರ್ವಹಿಸುತ್ತಿದೆ.

**ಆಯೋಗದ ಪ್ರಕಾರ್ಯಗಳು:**

1. ನಾಗರೀಕರ ಯಾವುದೇ ವರ್ಗಗಳನ್ನು ಹಿಂದುಳಿದ ವರ್ಗಗಳ ಪಟ್ಟಿಯಲ್ಲಿ ಸೇರಿಸಬೇಕೆಂದು ಬಂದ ಕೋರಿಕೆಗಳನ್ನು ಪರಿಶೀಲಿಸುವುದು ಮತ್ತು ಯಾವುದೇ ಹಿಂದುಳಿದ ವರ್ಗವನ್ನು ಅಂಥ ಪಟ್ಟಿಯಲ್ಲಿ ಹೆಚ್ಚಾಗಿ ಸೇರಿಸಲಾಗಿದೆ ಎಂದೂ ಅಥವಾ ಸೇರಿಸಲಾಗಿಲ್ಲವೆಂದು ಬಂದ ದೂರುಗಳ ವಿಚಾರಣೆ ಮಾಡುವುದು ಮತ್ತು ಸರ್ಕಾರಕ್ಕೆ ಅದು ಸೂಕ್ತವೆಂದು ತೋರುವ ಸಲಹೆಯನ್ನು ನೀಡುವುದು.
2. ಹಿಂದುಳಿದ ವರ್ಗಗಳಿಗೆ ಸೇರಿದ ಜನರ ಸಾಮಾಜಿಕ ಮತ್ತು ಶೈಕ್ಷಣಿಕ ಸ್ಥಿತಿಯ ಬಗ್ಗೆ ಹಾಗೂ ಸಮಸ್ಯೆಗಳ ಬಗ್ಗೆ ಸಮೀಕ್ಷೆ ನಡೆಸುವುದು.
3. ಹಿಂದುಳಿದ ವರ್ಗಗಳಿಗಾಗಿ ಇರುವ ಅನೇಕ ಕಲ್ಯಾಣ ಕಾರ್ಯಕ್ರಮಗಳ ಅನುಷ್ಠಾನಕ್ಕೆ ಸಂಬಂಧಿಸಿದಂತೆ ಮೇಲ್ವಿಚಾರಣೆ ಮಾಡುವುದು.
4. ರಾಜ್ಯ ಸರ್ಕಾರವು ಯಾವುದೇ ಸಮಯದಲ್ಲಿ ಮತ್ತು ಈ ಅಧಿನಿಯಮವು ಜಾರಿಗೆ ಬಂದ ದಿನಾಂಕದಿಂದ ಮತ್ತು ಹತ್ತು ವರ್ಷಗಳ ಅವಧಿಯ ಮುಕ್ತಾಯವಾದಾಗ ಮತ್ತು ಅದರ ನಂತರ ಬರುವ ಹತ್ತು ವರ್ಷಗಳ ಅವಧಿ ಮುಕ್ತಾಯವಾಗುವಾಗ ಹಿಂದುಳಿದ ಸ್ಥಿತಿಯನ್ನು ದಾಟಿದಂತಹ ವರ್ಗಗಳನ್ನು ತೆಗೆದುಹಾಕುವ ಅಥವಾ ಹೊಸ ಹಿಂದುಳಿದ ವರ್ಗಗಳನ್ನು ಅಂಥ ಪಟ್ಟಿಯಲ್ಲಿ ಸೇರಿಸುವ ಅಂಶವನ್ನು ಗಮನದಲ್ಲಿರಿಸಿಕೊಂಡು ಅವುಗಳನ್ನು ಪುನರ್ ವೀಕ್ಷಿಸುವುದು.

**ಆಯೋಗದ ಅಧಿಕಾರಗಳು:** ಆಯೋಗವು ಮೇಲ್ಕಾಣಿಸಿದ ಪ್ರಕಾರ್ಯಗಳನ್ನು ನಿರ್ವಹಿಸುವಾಗ, ಒಂದು ದಾವೆಯನ್ನು ವಿಚಾರಣೆ ಮಾಡುವಾಗ, ಸಿವಿಲ್ ನ್ಯಾಯಾಲಯುವು ಹೊಂದಿರುವ ಕೆಳಕಂಡ ಎಲ್ಲಾ ಅಧಿಕಾರಗಳನ್ನು ರಾಜ್ಯ ಹಿಂದುಳಿದ ವರ್ಗಗಳ ಆಯೋಗವು ಹೊಂದಿರುತ್ತದೆ.

1. ರಾಜ್ಯದ ಯಾವುದೇ ಭಾಗದಿಂದ ಯಾರೇ ವ್ಯಕ್ತಿಯನ್ನು (ಸಮನ್) ಆಜ್ಞಾಪಿಸಿ ಕರೆಸಬಹುದು. ಹಾಜರಾತಿಯನ್ನು ಒತ್ತಾಯ ಪಡಿಸಬಹುದು ಮತ್ತು ಪ್ರಮಾಣ ಮಾಡಿಸುವ ಮೂಲಕ ಅವನನ್ನು ಪರೀಕ್ಷೆಗೆ ಒಳಪಡಿಸಬಹುದು.

2. ಯಾವುದೇ ದಾಖಲೆಗಳನ್ನು ಹೊರತೆಗೆಸಿ, ಒದಗಿಸಲು ಅಗತ್ಯ ಪಡಿಸುವುದು.
3. ಪ್ರಮಾಣ ಪತ್ರಗಳ ಮೂಲಕ ಪುರಾವೆ/ ರುಜುವಾತುಗಳನ್ನು ಸ್ವೀಕರಿಸುವುದು.
4. ಯಾವುದೇ ನ್ಯಾಯಾಲಯ ಅಥವಾ ಕಛೇರಿಯಿಂದ ಯಾವುದೇ ಸಾರ್ವಜನಿಕ ದಾಖಲೆಯನ್ನು ಅಥವಾ ಅದರ ಪ್ರತಿಯನ್ನು ತರಿಸುವುದು.
5. ಸಾಕ್ಷಿ ಮತ್ತು ದಸ್ತಾವೇಜುಗಳ ಪರೀಕ್ಷೆಗೆ ನಿರೂಪ (Commission) ಹೊರಡಿಸುವುದು ಮತ್ತು
6. ನಿಯಮಿಸಬಹುದಾದಂಥ ಇತರ ಯಾವುದೇ ವಿಷಯವನ್ನು ನಿಗದಿಸುವುದು.

**ಆಯೋಗದ ರಚನೆ:**

ಬೆಂಗಳೂರಿನಲ್ಲಿ ಕೇಂದ್ರ ಕಾರ್ಯಸ್ಥಾನವನ್ನು ಹೊಂದಿರುವ, ಆಯೋಗವನ್ನು ರಚಿಸುವ ಅಧಿಕಾರವು ರಾಜ್ಯ ಸರ್ಕಾರದ್ದಾಗಿರುತ್ತದೆ. ಈ ಆಯೋಗದಲ್ಲಿ ಅಧ್ಯಕ್ಷರು ಹಾಗೂ ಐದು ಸದಸ್ಯರಿದ್ದು, ನಿರ್ದೇಶಕರು/ ಆಯುಕ್ತರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ, ಇವರು ಸದಸ್ಯ ಕಾರ್ಯದರ್ಶಿಗಳಾಗಿರುತ್ತಾರೆ.

ಉಚ್ಛ ನ್ಯಾಯಾಲಯದ ನ್ಯಾಯಮೂರ್ತಿಯಾಗಿರುವ ಅಥವಾ ನ್ಯಾಯಮೂರ್ತಿ ಆಗಿದ್ದವರನ್ನು ಅಥವಾ ನ್ಯಾಯಮೂರ್ತಿಯಾಗಲು ಅರ್ಹತೆ ಹೊಂದಿದವರನ್ನು ಅಥವಾ ಸಮಾಜ ವಿಜ್ಞಾನಿ ಒಬ್ಬರನ್ನು ಅಧ್ಯಕ್ಷರನ್ನಾಗಿಯೂ ಮತ್ತು ಹಿಂದುಳಿದ ವರ್ಗಗಳ ಕುರಿತಾಗಿ ವಿಶೇಷ ಜ್ಞಾನವುಳ್ಳ ನಾಲ್ವರನ್ನು ಹಾಗೂ ಸಮಾಜ ವಿಜ್ಞಾನಿ ಒಬ್ಬರನ್ನು ಸದಸ್ಯರುಗಳನ್ನಾಗಿಯೂ, ರಾಜ್ಯ ಸರ್ಕಾರವು ನೇಮಕ ಮಾಡುತ್ತಾರೆ.

ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಳ ಆಯೋಗದ ಅಧಿನಿಯಮ (4)ರ ಉಪನಿಯಮ (1)ರನ್ವಯ ರಾಜ್ಯ ಸರ್ಕಾರದ ಇಚ್ಛೆಗೆ ಒಳಪಟ್ಟು, ಅಧ್ಯಕ್ಷರು ಮತ್ತು ಸದಸ್ಯರು ಅವರು ಪದಧಾರಣ ಮಾಡಿದ ದಿನದಿಂದ ಮೂರು ವರ್ಷಗಳ ಅವಧಿಯವರೆಗೆ ಅವರವರ ಹುದ್ದೆಯ ಅಧಿಕಾರವನ್ನು ಹೊಂದಿರುತ್ತಾರೆ.

**ಅಧಿಕಾರಿ/ ಸಿಬ್ಬಂದಿಯ ಶ್ರೇಣೀಕರಣ:**

ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಳ ಆಯೋಗದ ಕಛೇರಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಅಧಿಕಾರಿ/ ಸಿಬ್ಬಂದಿಯ ಶ್ರೇಣೀಕರಣ ಕೆಳಗಿನಂತೆ ಇರುತ್ತದೆ.




**ತೀರ್ಮಾನದ ವಿಧಾನ:**

ಹೊಸ ಸೇರ್ಪಡೆ, ಪರ್ಯಾಯ ಪದಗಳ ಸೇರ್ಪಡೆ, ಪ್ರವರ್ಗ ಬದಲಾವಣೆ, ಕಾಗುಣಿತ ತಿದ್ದುಪಡಿ, ಇವೇ ಮುಂತಾದ ಕೋರಿಕೆಗಳುಳ್ಳ ಮನವಿಗಳು, ಆಯೋಗದಲ್ಲಿ ಸ್ವೀಕೃತವಾದ ಮೇಲೆ ಆಯೋಗವು ಅವಶ್ಯಕವಾದಾಗಲೆಲ್ಲ ಸಭೆ ಸೇರುತ್ತದೆ. ಪ್ರಶ್ನಾವಳಿ, ಬಹಿರಂಗ ವಿಚಾರಣೆ, ಮನವಿದಾರರ ಹೇಳಿಕೆಗೆ ಅವಕಾಶ, ದಾಖಲೆ ಸಾಕ್ಷಿ ಪುರಾವೆಗಳ ಸಂಗ್ರಹಣೆ, ನ್ಯಾಯಾಲಯದ ಪ್ರಕರಣಗಳ ತೀರ್ಪುಗಳು, ಮುಂತಾದವುಗಳ ಮೂಲಕ ಸ್ವೀಕೃತ ಮನವಿಗಳನ್ನು ಕೂಲಂಕುಷವಾಗಿ ಪರಿಶೀಲಿಸಿ ಸೂಕ್ತ ತೀರ್ಮಾನವನ್ನು ಆಯೋಗವು ಕೈಗೊಳ್ಳುತ್ತದೆ.

**ಆಯೋಗದ ಸಲಹೆ/ ವರದಿ:**

ಕರ್ನಾಟಕ ರಾಜ್ಯ ಮಾಹಿತಿ ಹಕ್ಕು ಅಧಿನಿಯಮಗಳ ನಿಯಮ (8) ರನ್ವಯ ಸಾರ್ವಜನಿಕ ಜೀವ, ಆಸ್ತಿಪಾಸ್ತಿ ಹಾಗೂ ಕಾನೂನು ಮತ್ತು ಸುವ್ಯವಸ್ಥೆ ಕಾಪಾಡಬೇಕಾಗಿರುವುದನ್ನು ಗಮನದಲ್ಲಿರಿಸಿಕೊಂಡು ಮೀಸಲಾತಿ ಕುರಿತಂತೆ ಆಯೋಗದಿಂದ ಸರ್ಕಾರಕ್ಕೆ ನೀಡಲ್ಪಟ್ಟ ಸಲಹೆ, ವರದಿ, ದಾಖಲಾತಿ ಮುಂತಾದವುಗಳಿಗೆ ಸಂಬಂಧಿಸಿದ ಮಾಹಿತಿಗಳನ್ನು ಆಯೋಗವು ಒದಗಿಸುವುದಿಲ್ಲ. ಸದರಿ ಮಾಹಿತಿಗಳನ್ನು ನೀಡುವುದು ಸರ್ಕಾರದ ವಿವೇಚನೆಗೆ ಬಿಟ್ಟಿದ್ದಾಗಿರುತ್ತದೆ.

**ಮಾಹಿತಿ ಅಧಿಕಾರಿಗಳ ನೇಮಕಾತಿ:**

ಕರ್ನಾಟಕ ಮಾಹಿತಿ ಹಕ್ಕು ಅಧಿನಿಯಮಗಳು 2005ರ ಅಧಿನಿಯಮ (5)ರ ಉಪನಿಯಮ (1) ಮತ್ತು (2)ರಲ್ಲಿ ಸೂಚಿಸಿರುವ ಪ್ರಕಾರ ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಳ ಆಯೋಗಕ್ಕೆ ಮಾಹಿತಿ ಕೋರಿ ಬಂದ ಮನವಿಗಳನ್ನು ಮಾಹಿತಿ ಹಕ್ಕು ಅಧಿನಿಯಮಗಳು 2005ರ ಪ್ರಕಾರ ಪರಿಶೀಲಿಸಿ, ಸಂಬಂಧಿಸಿದ ಮಾಹಿತಿಗಳನ್ನು ಸಾರ್ವಜನಿಕರಿಗೆ ಒದಗಿಸಲು, ಸಾರ್ವಜನಿಕ ಮಾಹಿತಿ ಅಧಿಕಾರಿ (ಸಕ್ಷಮ ಪ್ರಾಧಿಕಾರಿ) ಮತ್ತು ಸಹಾಯಕ ಮಾಹಿತಿ ಅಧಿಕಾರಿಗಳನ್ನೂ: ಮಾಹಿತಿ ಹಕ್ಕು ಅಧಿನಿಯಮಗಳ ಅಧಿನಿಯಮ (19) (1)ರ ಪ್ರಕಾರ ಮೇಲ್ಮನವಿ ಅಧಿಕಾರಿಗಳನ್ನೂ: ನೇಮಿಸಬೇಕಾಗಿರುತ್ತದೆ. ಅದರಂತೆ ಕೆಳಕಂಡ ಅಧಿಕಾರಿಗಳನ್ನು ನೇಮಕ ಮಾಡಲಾಗಿದೆ.

| ಕ್ರ.ಸಂ. | ಅಧಿಕಾರಿಗಳು | ನೇಮಕಾತಿ | ದೂರವಾಣಿ ಸಂಖ್ಯೆ |
|---|---|---|---|
| 1. | ಉಪ ಕಾರ್ಯದರ್ಶಿ (ಸಾಂಖ್ಯಿಕ) | ಸಾರ್ವಜನಿಕ ಮಾಹಿತಿ ಅಧಿಕಾರಿಗಳು/ ಸಕ್ಷಮ ಪ್ರಾಧಿಕಾರಿಗಳು | 22268571 |
| 2. | ಉಪ ನಿರ್ದೇಶಕರು (ಸಾಂಖ್ಯಿಕ) | ಸಹಾಯಕ ಮಾಹಿತಿ ಅಧಿಕಾರಿಗಳು | 22268576 |
| 3. | ಸಂಶೋಧನಾ ಅಧಿಕಾರಿ | ಸಹಾಯಕ ಮಾಹಿತಿ ಅಧಿಕಾರಿಗಳು | 22268575 |
| 4. | ಉಪ ಕಾರ್ಯದರ್ಶಿ (ಆಡಳಿತ) ಆಡಳಿತಕ್ಕೆ ಸಂಬಂಧಪಟ್ಟ ಮಾಹಿತಿಗೆ | ಸಹಾಯಕ ಮಾಹಿತಿ ಅಧಿಕಾರಿಗಳು | 22250951 |
| 5. | ಶಾಖಾಧಿಕಾರಿಗಳು (ಜಾತಿ, ಮನವಿ, ದೂರು ಮತ್ತು ಸಮೀಕ್ಷೆ ಇತ್ಯಾದಿ ಮಾಹಿತಿಗೆ ಸಂಬಂಧಪಟ್ಟಂತೆ) | ಸಹಾಯಕ ಮಾಹಿತಿ ಅಧಿಕಾರಿಗಳು | 22268575 |
| 6. | ಸದಸ್ಯ ಕಾರ್ಯದರ್ಶಿ ಕ.ರಾ.ಹಿಂ.ವ. ಆಯೋಗ | ಮೇಲ್ಮನವಿ ಪ್ರಾಧಿಕಾರಿ | 22268572<br>22232105 |

ಹಿಂದುಳಿದ ವರ್ಗಗಳ ಆಯೋಗದ ಕಾರ್ಯವ್ಯಾಪ್ತಿಗೆ ಒಳಪಡುವ ಯಾವುದೇ ವಿಷಯಗಳಿಗೆ ಸಂಬಂಧಿಸಿದ ಮಾಹಿತಿಗಳನ್ನು ಪಡೆಯಲು ಮೇಲ್ಕಾಣಿಸಿದ ಸಾರ್ವಜನಿಕ ಮಾಹಿತಿ ಅಧಿಕಾರಿಗಳಿಗೆ ಅರ್ಜಿ ಸಲ್ಲಿಸಬಹುದು ಮತ್ತು ಅಗತ್ಯವಾದಲ್ಲಿ ಸದಸ್ಯ ಕಾರ್ಯದರ್ಶಿಗಳಿಗೆ ಅಪೀಲನ್ನು ಸಲ್ಲಿಸಬಹುದು.

**ಮಾಹಿತಿ ಒದಗಿಸುವುದಕ್ಕಾಗಿ ಕಾರ್ಯವಿಧಾನ:**

ಈ ಅಧಿನಿಯಮದಲ್ಲಿ ಮಾಹಿತಿಯನ್ನು ಪಡೆಯಲು ಇಚ್ಛಿಸುವ ಯಾವುದೇ ವ್ಯಕ್ತಿಯು, ಕರ್ನಾಟಕ ಮಾಹಿತಿ ಹಕ್ಕು ಅಧಿನಿಯಮಗಳ ನಿಯಮ 4(1)ರನ್ವಯ ನಿಗದಿಸಲಾಗಿರುವ, ನಮೂನೆ (ಎ)ಯಲ್ಲಿ, ಅಗತ್ಯ ಮಾಹಿತಿಗಳನ್ನು ಸ್ಪಷ್ಟವಾಗಿ ತಿಳಿಸಿ ಸಾರ್ವಜನಿಕ ಮಾಹಿತಿ ಅಧಿಕಾರಿಗೆ/ ಸಕ್ಷಮ ಪ್ರಾಧಿಕಾರಕ್ಕೆ 10/- ರೂ.ಗಳ ಆರಂಭ ಶುಲ್ಕದೊಂದಿಗೆ, ಅರ್ಜಿಯನ್ನು ಸಲ್ಲಿಸಬೇಕು. ಅರ್ಜಿ ಮತ್ತು ಅರ್ಜಿ ಶುಲ್ಕವನ್ನು ಸ್ವೀಕರಿಸಿದವರು ಸ್ವೀಕೃತಿಯನ್ನು ನೀಡಬೇಕು.

ದಸ್ತಾವೇಜಿನ ಪ್ರತಿಗಳನ್ನು ಒದಗಿಸುವುದಕ್ಕಾಗಿ 4ನೇ ನಿಯಮದ ಉಪನಿಯಮ 5ರನ್ವಯ ಕೆಳಗಿನ ಕೋಷ್ಟಕದಲ್ಲಿ ತಿಳಿಸಿರುವಂತೆ ಶುಲ್ಕವನ್ನು ನಿಗದಿಸಲಾಗಿದೆ.

**ಕೋಷ್ಟಕ**

| | | |
|---|---|---|
| 1. | ಏಳನೇ ನಿಯಮದ ಉಪನಿಯಮ (1)ರಡಿಯಲ್ಲಿ ಬೇಕಾದ ಮಾಹಿತಿಗಳನ್ನು ಒದಗಿಸಲು ಎ4 ಅಳತೆಯ ಕಾಗದದಲ್ಲಿನ ವಿಷಯಗಳಿಗೆ | ಪ್ರತಿ ಪುಟಕ್ಕೆ ರೂ.2/- ರಂತೆ |
| 2. | ಏಳನೇ ನಿಯಮದ ಉಪನಿಯಮ (1)ರಡಿಯಲ್ಲಿ ಭೂಪಟಗಳ ನಕ್ಷೆಗಳು, ವರದಿಗಳು ತಾಂತ್ರಿಕ ಮಾಹಿತಿಗಳು ಅಥವಾ ಭಾಗಶಃ ದಾಖಲೆ ಅಥವಾ ಸ್ಯಾಂಪಲ್ ಅಥವಾ ಮಾದರಿಗಳು. | (ಇವುಗಳನ್ನು ಒದಗಿಸಲು ತೊಡಗಿಸಬೇಕಾದ ಪರಿಶ್ರಮ, ಕೂಲಿ ಮತ್ತು ಸಾಮಗ್ರಿಗಳ ಅಂದಾಜಿನ ಮೌಲ್ಯದ ಮೇಲೆ ಈ ದರವನ್ನು ನಿರ್ಧರಿಸಲಾಗುವುದು) |
| 3. | ದಾಖಲೆಗಳು ಮತ್ತು ಕಾಗದ ಪತ್ರಗಳ ತಪಾಸಣೆ/ ಪರಿಶೀಲನೆಗೆ:<br>i) ಮೊದಲ ಒಂದು ಗಂಟೆಗೆ<br>ii) ಆ ನಂತರದ ಪ್ರತಿ ಅರ್ಧ ಗಂಟೆಗೆ ಅಥವಾ ಆನಂತರದ ಭಾಗಶಃ ಸಮಯಕ್ಕೆ: | <br>ಯಾವುದೇ ಶುಲ್ಕವಿಲ್ಲ.<br>ರೂ.20.00ರಂತೆ |
| 4. | ನಿರ್ವಹಿಸಿದ ಕಾಮಗಾರಿಗಳ ತಪಾಸಣೆ: | ಈ ಅವಕಾಶವನ್ನು ಮಾಡಿಕೊಡಲು ತೊಡಗಿಸಲ್ಪಡುವ ಸಿಬ್ಬಂದಿ ಸೌಲಭ್ಯ ಮತ್ತು ಪರಿಕರಗಳ ಆಧಾರದ ಮೇಲೆ ಈ ದರ ನಿಗದಿಸಲಾಗುವುದು. |
| 5. | a) ಏಳನೇ ಉಪನಿಯಮ (5)ರಡಿಯಲ್ಲಿ ಮಾಹಿತಿಗಳನ್ನು ಒದಗಿಸಲು:<br>ಡಿಸ್ಕೆಟ್/ ಫ್ಲಾಪಿಗಳಲ್ಲಿ ಅಥವಾ ಇತರ ಎಲೆಕ್ಟ್ರಾನಿಕ್ ವಿಧಾನಗಳಲ್ಲಿ ಮಾಹಿತಿ ನೀಡಲು:<br>b) ಮುದ್ರಿತ/ ಪ್ರಕಟಿತ ಮಾಹಿತಿ ಒದಗಿಸಲು<br>c) ಪ್ರಕಟಿತ ಪುಸ್ತಕದಿಂದ ಉದ್ಧೃತ ಭಾಗವನ್ನು ಜೆರಾಕ್ಸ್ ಮಾಡಿಸಿಕೊಡಲು ಜೆರಾಕ್ಸ್‌ನ ಪ್ರತಿ ಎ4 ಅಳತೆಯ ಪುಟಕ್ಕೆ. | ಪ್ರತಿ ಡಿಸ್ಕೆಟ್ ಅಥವಾ ಪ್ರತಿ ಫ್ಲಾಪಿಗೆ ರೂ.50.00 ರಂತೆ<br>ಪುಸ್ತಕ/ ವರದಿಯಲ್ಲಿ ಪ್ರಕಟಿಸಿದ ದರ<br>ರೂ.2.00 ರಂತೆ |

ನಿಗದಿತ ಶುಲ್ಕವನ್ನು ಅರ್ಜಿದಾರರು ಭಾರತೀಯ ಪೋಸ್ಟಲ್ ಆರ್ಡರ್ ಅಥವಾ ಡಿ.ಡಿ. ಅಥವಾ ಬ್ಯಾಂಕರ್ಸ್ ಚೆಕ್ ಅಥವಾ ಪೇ ಆರ್ಡರ್ ಮೂಲಕ, ಇಲ್ಲವೇ, ಪಾವತಿ ರಶೀದಿ ಮೂಲಕ ಆಯೋಗದ ಸಾರ್ವಜನಿಕ ಮಾಹಿತಿ ಅಧಿಕಾರಿಗಳ ಹೆಸರಿಗೆ, ಪಾವತಿ ಮಾಡಬೇಕು.

ಏಳನೇ ಉಪನಿಯಮದ 5ನೇ ಉಪನಿಯಮದನ್ವಯ ಶುಲ್ಕ ವಿನಾಯಿತಿ ಪಡೆಯಬಯಸುವವರು ತಾವು ಬಡತನ ರೇಖೆಗಿಂತ ಕೆಳಗಿರುವ ಬಗ್ಗೆ ಸಂಬಂಧಿತ ಪ್ರಾಧಿಕಾರದಿಂದ ಪಡೆದ ಸಿಂಧುತ್ವ ಪ್ರಮಾಣ ಪತ್ರವನ್ನು ಒದಗಿಸಬೇಕು.

**ಅಪೀಲುಗಳು (ಮೇಲ್ಮನವಿಗಳು)**

ಯಾವುದೇ ವ್ಯಕ್ತಿಯು ಕರ್ನಾಟಕ ಮಾಹಿತಿ ಹಕ್ಕು ಅಧಿನಿಯಮಗಳು 2005ರ (1)ನೇ ಉಪನಿಯಮ ಅಥವಾ (7)ನೇ ಪ್ರಕರಣದ 3ನೇ ಉಪನಿಯಮದ ಉಪವಾಕ್ಯ (ಎ) ಯಲ್ಲಿ ನಿಗದಿಸಿದ ಸಮಯದೊಳಗೆ, ಯಾವುದೇ ಉತ್ತರ ಅಥವಾ ತೀರ್ಮಾನವನ್ನು ಪಡೆಯದಿದ್ದಲ್ಲಿ ಅಥವಾ

ಸಾರ್ವಜನಿಕ ಮಾಹಿತಿ ಅಧಿಕಾರಿಯ ಉತ್ತರದಿಂದ/ ತೀರ್ಮಾನದಿಂದ ಅಸಮಾಧಾನಗೊಂಡಿದ್ದಲ್ಲಿ ಇಂತಹ ತೀರ್ಮಾನ/ ಉತ್ತರವನ್ನು ಪಡೆದ 30 ದಿನಗಳೊಳಗೆ ಅಥವಾ ಮಾಹಿತಿ ಪಡೆಯಲು ನಿಗದಿಸಿದ ಸಮಯ ಮುಗಿದ ನಂತರ ಮಾಹಿತಿ ಹಕ್ಕು ಅಧಿನಿಯಮಗಳ 19ನೇ ಪ್ರಕರಣದ 1ನೇ ಉಪ ನಿಯಮದನ್ವಯ ಮೇಲ್ಮನವಿಯನ್ನು ಪ್ರಾಧಿಕಾರಕ್ಕೆ ಸಲ್ಲಿಸಬೇಕು.

ಮೇಲ್ಮನವಿ ಸಲ್ಲಿಸುವ ಸಂದರ್ಭದಲ್ಲಿ ಪ್ರತಿಯೊಂದು ಅಪೀಲು ಯಾವ ಆದೇಶದ ವಿರುದ್ಧ ಸಲ್ಲಿಸಲಾಗಿದೆಯೋ, ಆ ಆದೇಶದ ಒಂದು ಪ್ರತಿಯನ್ನು ಹೊಂದಿರಬೇಕು ಮತ್ತು ಅದರಲ್ಲಿ ಅರ್ಜಿದಾರನ ಹೆಸರು, ವಿಳಾಸ, ಮತ್ತು ಸಾರ್ವಜನಿಕ ಮಾಹಿತಿ ಅಧಿಕಾರಿ/ ಸಕ್ಷಮ ಪ್ರಾಧಿಕಾರಕ್ಕೆ ಸಂಬಂಧಪಟ್ಟ ವಿವರಗಳನ್ನು, ಸಾರ್ವಜನಿಕ ಮಾಹಿತಿ ಅಧಿಕಾರಿ/ ಸಕ್ಷಮ ಪ್ರಾಧಿಕಾರದ ಯಾವ ಆದೇಶದ ವಿರುದ್ಧ ಅಪೀಲು ಮಾಡಲಾಗುತ್ತಿದೆಯೋ ಅಂತಹ ಆದೇಶ ಯಾವುದಾದರೂ ಇದ್ದಲ್ಲಿ, ಅದರ ಸ್ವೀಕೃತಿ ದಿನಾಂಕವನ್ನೂ, ಅಪೀಲಿಗೆ ಆಧಾರಗಳನ್ನೂ ಹಾಗೂ ಅಪೀಲುದಾರರು ಕ್ಲೈಮು ಮಾಡುವ ಪರಿಹಾರವನ್ನೂ ಸ್ಪಷ್ಟವಾಗಿ ತಿಳಿಸಬೇಕು.

**ಮಾಹಿತಿಯನ್ನು ಪಡೆಯುವುದಕ್ಕಾಗಿ ಕಛೇರಿಯ ವಿಳಾಸ:**

ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಳ ಆಯೋಗ, ನಂ.332, 2ನೇ ಮಹಡಿ, ದಾರುಸ್ ಸಲಾಂ ಕಾಂಪ್ಲೆಕ್ಸ್, ಕ್ವೀನ್ಸ್ ರಸ್ತೆ, ಬೆಂಗಳೂರು-52.

**ಕೆಲಸದ ವೇಳೆ:**

ಬೆಳಿಗ್ಗೆ 10.00 ರಿಂದ 1.30 ಗಂಟೆ, ಮಧ್ಯಾಹ್ನ 2-15 ರಿಂದ 5-30 ಗಂಟೆ, ಅಧಿಕಾರಿಗಳನ್ನು ಸಂದರ್ಶಿಸುವ ವೇಳೆ-ಮಧ್ಯಾಹ್ನ 3-30 ರಿಂದ 5-00 ಗಂಟೆ, (ಸಾರ್ವಜನಿಕ ರಜೆಯನ್ನು ಹೊರತುಪಡಿಸಿ)

ಸದಸ್ಯ ಕಾರ್ಯದರ್ಶಿ,
ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಳ ಆಯೋಗ,
ಬೆಂಗಳೂರು.

**ನಮೂನೆ-ಎ**

**4(1)ನೇ ನಿಯಮ**

1) ಅರ್ಜಿದಾರನ ಹೆಸರು
2) ವಿಳಾಸ
3) ದೂರವಾಣಿ ಸಂಖ್ಯೆ
4) ಕೋರಿರುವ ದಸ್ತಾವೇಜಿನ ವಿವರಣೆ
5) ದಸ್ತಾವೇಜು ಸಂಬಂಧ ಪಟ್ಟಿರುವ ವರ್ಷ
6) ಯಾವ ಉದ್ದೇಶಕ್ಕಾಗಿ ಮಾಹಿತಿಯ ಅವಶ್ಯಕತೆ ಇದೆ
ಮತ್ತು ಮಾಹಿತಿಯನ್ನು ಪಡೆಯುವಲ್ಲಿ ಅರ್ಜಿದಾರನ ಆಸಕ್ತಿ ಏನು
7) ರಸೀದಿ ಸಂಖ್ಯೆ/ ಮೊತ್ತ ದಿನಾಂಕ:

ಸ್ಥಳ:
ದಿನಾಂಕ:                                        ಅರ್ಜಿದಾರನ ಸಹಿ:

(ದೋಷ ಪೂರಿತ ಅಥವಾ ಅಪೂರ್ಣವಾದ ಅರ್ಜಿಗಳನ್ನು ಹಿಂತಿರುಗಿಸಲಾಗುವುದು)

ಸದಸ್ಯ ಕಾರ್ಯದರ್ಶಿ,
ಪಿ.ಆರ್.1533                                        ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಳ ಆಯೋಗ,
ಬೆಂಗಳೂರು.

## ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು

## ಅಂತಿಮ ಅಧಿಸೂಚನೆ

### ನಂ.ಕೆ.ಎಸ್.ಎ.: ಸಿಆರ್: 42/ 95-96, ಬೆಂಗಳೂರು, ದಿನಾಂಕ:5ನೇ ಅಕ್ಟೋಬರ್, 2006

ನಂ.ಕೆ.ಎಸ್.ಎ: ಸಿ.ಆರ್: 42/ 95-96, ದಿನಾಂಕ:05.05.2005ರ ಪ್ರಿಲಿಮಿನರಿ ಅಧಿಸೂಚನೆಯನ್ನು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಿಸಿ ಅದರಲ್ಲಿ ಸದರಿ ಅಧಿಸೂಚನೆಯ ಷೆಡ್ಯೂಲ್ ನಲ್ಲಿರುವ ಬೆಂಗಳೂರು ನಗರ ಫೈರ್ ವರ್ಕ್ಸ್ ಕಾಲೋನಿ, ಜೆ.ಸಿ. ರಸ್ತೆ, ಬೆಂಗಳೂರು ಬ್ಲಾಕ್ 11 ವನ್ನು ಕರ್ನಾಟಕ ಕೊಳಚೆ ಪ್ರದೇಶಗಳ (ನಿರ್ಮೂಲನೆ ಮತ್ತು ಅಭಿವೃದ್ಧಿ) ಕಾಯ್ದೆ 1973ರ ಸೆಕ್ಷನ್ 3 ರಡಿಯಲ್ಲಿ ಪ್ರಾರಂಭವಾಗಿ ಕೊಳಚೆ ಪ್ರದೇಶವೆಂದು ಘೋಷಿಸಿ ಸಂಬಂಧಿಸಿದವರಿಂದ ಆಕ್ಷೇಪಣೆಗಳನ್ನು ಆಹ್ವಾನಿಸಲಾಗಿತ್ತು.

ಸದರಿ ಪ್ರಿಲಿಮಿನರಿ ಅಧಿಸೂಚನೆಗೆ ಸಂಬಂಧಿಸಿದಂತೆ ಆಕ್ಷೇಪಣೆಗಳು ಯಾವುದೂ ಬಂದಿರುವುದಿಲ್ಲ. ಈ ಬಗ್ಗೆ ಆಯುಕ್ತರು, ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿಯವರು ವರದಿ ಸಲ್ಲಿಸಿ ಈ ಪ್ರದೇಶದಲ್ಲಿ ಗುಡಿಸಲು ಇರುವುದರಿಂದ ಹಾಗೂ ಈ ಪ್ರದೇಶವು ಕೊಳಚೆ ಗುಣಲಕ್ಷಣಗಳನ್ನು ಹೊಂದಿರುವುದರಿಂದ ಇದನ್ನು ಕೊಳಚೆ ಪ್ರದೇಶವೆಂದು ಅಂತಿಮವಾಗಿ ಘೋಷಿಸುವಂತೆ ತಿಳಿಸಿರುತ್ತಾರೆ.

ಪ್ರಶ್ನಿತ ಕೊಳಚೆ ಪ್ರದೇಶದಲ್ಲಿ ಗುಡಿಸಲು/ ಮನೆಗಳು ದುರಸ್ಥಿ ಇಲ್ಲದೇ ಕುಡಿಯುವ ನೀರು, ದೀಪ, ರಸ್ತೆ, ಚರಂಡಿ ಇತ್ಯಾದಿ ಮೂಲಭೂತ ಸೌಕರ್ಯಗಳಿಲ್ಲದೇ ಅನಾರೋಗ್ಯದ ವಾತಾವರಣ ಉಂಟಾಗಿರುತ್ತದೆ. ಸದರಿ ಪ್ರದೇಶವನ್ನು ಅಭಿವೃದ್ಧಿ ಪಡಿಸುವುದು ಅತ್ಯಗತ್ಯವಾಗಿರುತ್ತದೆ. ಆದ್ದರಿಂದ ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನೆ) ಕಾಯ್ದೆ 1973ರ ಸೆಕ್ಷನ್ 3 ರಡಿಯಲ್ಲಿ ದತ್ತವಾಗಿರುವ ಅಧಿಕಾರದಂತೆ ಈ ಕೆಳಕಂಡ ಷೆಡ್ಯೂಲ್ ನಲ್ಲಿ ನಮೂದಿಸಿರುವ ಪ್ರದೇಶವನ್ನು ಮೇಲ್ಕಂಡ ಕಾಯ್ದೆಯ ಸೆಕ್ಷನ್ 3ರಡಿಯಲ್ಲಿ ಅಂತಿಮವಾಗಿ ಕೊಳಚೆ ಪ್ರದೇಶವೆಂದು ಘೋಷಿಸಿರುತ್ತೇನೆ.

**ಷೆಡ್ಯೂಲ್**

ಬೆಂಗಳೂರು ನಗರ ಚಾಮರಾಜಪೇಟೆ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಬರುವ ಫೈರ್ ವರ್ಕ್ಸ್ ಕಾಲೋನಿ, ಜೆ.ಸಿ. ರಸ್ತೆ, ಬೆಂಗಳೂರು ಬ್ಲಾಕ್ 11ರ ಬಳಿ ಇರುವ ಕೊಳಚೆ ಪ್ರದೇಶದ ಚಕ್ಕುಬಂದಿ ಮತ್ತು ಹದ್ದುಬಸ್ತು ತಃಖ್ತೆ.

| ಕ್ರ. ಸಂ. | ಕೊಳಚೆ ಪ್ರದೇಶದ ಹೆಸರು ಮತ್ತು ಸ್ಥಳ | ಮಾಲೀಕರ ಹೆಸರು | ಸಿ.ಟಿ.ಎಸ್. ಸಂಖ್ಯೆ | ವಿಸ್ತೀರ್ಣ (ಚ.ಅ.) | ಚೆಕ್ಕುಬಂದಿಗಳು | | | |
|---|---|---|---|---|---|---|---|---|
| | | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ |
| 1. | ಫೈರ್ ವರ್ಕ್ಸ್ ಕಾಲೋನಿ, ಜೆ.ಸಿ. ರಸ್ತೆ, ಬೆಂಗಳೂರು, ಬ್ಲಾಕ್ 11 | 1) ಶ್ರೀಮತಿ ಸಂಜೀವಮ್ಮ<br>2) ಶ್ರೀ ಎಲ್ಲಪ್ಪ<br>3) ಶ್ರೀ ಧರ್ಮರಾಯ ಸ್ವಾಮಿ ದೇವಸ್ಥಾನ ಅನ್ನಛತ್ರ ನಿಧಿ ಆಸ್ತಿ. | 1841<br>1851<br>1940 | 135.00<br>671.10<br>336.00<br>ಒಟ್ಟು ವಿಸ್ತೀರ್ಣ 1142.10 ಚ.ಮೀ. | ಸಿ.ಟಿ.ಎಸ್. ನಂ.1833 ರಿಂದ 1836 | ಸಿ.ಟಿ.ಎಸ್. ನಂ.1852 ರಿಂದ 1856 | ಸಿ.ಟಿ.ಎಸ್. ನಂ.1841ರ ಉಳಿಕೆ ಜಾಗ | ಸಿ.ಟಿ.ಎಸ್. ನಂ.1840ರ ಉಳಿಕೆ ಜಾಗ |

**ಎಂ.ಎ. ಸಾಧಿಕ್**

ಪಿ.ಆರ್.1534

ಜಿಲ್ಲಾಧಿಕಾರಿಗಳು,
ಬೆಂಗಳೂರು ಜಿಲ್ಲೆ, ಬೆಂಗಳೂರು.

## ಕರ್ನಾಟಕ ಸರ್ಕಾರದ ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪನಿರ್ದೇಶಕರ ಕಛೇರಿ, ಬಳ್ಳಾರಿ

## ಜ್ಞಾಪನಾ

## ಸಂ. ಇ4:ಸಿಬ್ಬಂದಿ:ದೂರು: 233: 04-05

**ವಿಷಯು:** ಸತತವಾಗಿ ದೀರ್ಘಾವದಿಯಲ್ಲಿ ಗೈರು ಹಾಜರಾಗಿರುವ ಶಿಕ್ಷಕರನ್ನು ಕರ್ತವ್ಯದಿಂದ ತೆಗೆದು ಹಾಕುವ ಬಗ್ಗೆ.

**ಉಲ್ಲೇಖ:** ಸಂಬಂಧಪಟ್ಟ ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಮತ್ತು ಶಾಲಾ ಕಾಲೇಜು ಮುಖ್ಯಸ್ಥರಿಂದ ವರದಿಯಾಗಿರುವ ಆಧಾರದ ಮೇರೆಗೆ.

ಮೇಲಿನ ವಿಷಯಕ್ಕೆ ಸಂಬಂಧಿಸಿದಂತೆ ಈ ಜಿಲ್ಲೆಯಲ್ಲಿನ ಈ ಕೆಳಗೆ ಕಾಣಿಸಿರುವ ಪ್ರಾಥಮಿಕ ಹಾಗೂ ಪ್ರೌಢಶಾಲಾ ಶಿಕ್ಷಕರು ದೀರ್ಘಾವಧಿಯಿಂದಾಗಿ ಸತತ ಕರ್ತವ್ಯಕ್ಕೆ ಗೈರು ಹಾಜರಾಗಿರುವುದು ಸಂಬಂಧಪಟ್ಟ ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಹಾಗೂ ಶಾಲಾ ಕಾಲೇಜು ಮುಖ್ಯಸ್ಥರಿಂದ ಬಂದಿರುವ ವರದಿಗಳ ಆಧಾರದ ಮೇಲೆ ಬೆಳಕಿಗೆ ಬಂದಿರುತ್ತದೆ. ಈ ಹಿನ್ನೆಲೆಯಲ್ಲಿ ಸರ್ಕಾರಿ ಅಧಿಸೂಚನೆ ಪತ್ರ ಸಂಖ್ಯೆ: ಸಿಆಸುಇ: 18: ಸೇಇವಿ 200) ದಿನಾಂಕ:14.09.2001ರ ಆಧಾರದ ಮೇಲೆ ಶಿಸ್ತು ಕ್ರಮ ತೆಗೆದುಕೊಂಡು ಸದ್ರಿಯವರುಗಳಿಗೆ ಕರ್ತವ್ಯದಿಂದ ತೆಗೆದು ಹಾಕುವ ಪ್ರಕ್ರಿಯೆ ಮುಂದುವರೆಸಿದೆ.

ಆದ್ದರಿಂದ ಈ ಕೆಳಕಂಡ ಪಟ್ಟಿಯಲ್ಲಿ ಕಾಣಿಸಿರುವ ಶಿಕ್ಷಕರುಗಳು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಗೊಂಡ ದಿನಾಂಕ ದಿಂದ 30 ದಿನಗಳ ವರೆಗೆ ಶಿಸ್ತು ಪ್ರಾಧಿಕಾರಿಯಾದ ಶ್ರೀ ಎಂ. ಶ್ರೀನಿವಾಸ ಇವರನ್ನು ಸಂಪರ್ಕಿಸಿ ಸೂಕ್ತ ಸಮಜಾಯಿಸಿ ಸಲ್ಲಿಸದೇ ಇದ್ದಲ್ಲಿ ನೀಡಿದ ಸಮಯದೊಳಗಾಗಿ ಸಂಪರ್ಕಿಸದೇ ಇದ್ದಲ್ಲಿ ಇರ್ತವ್ಯದಿಂದ ತೆಗೆದು ಹಾಕಲಾಗುವುದು.

**ಶಿಕ್ಷಕರುಗಳ ವಿವರ ಈ ಕೆಳಕಂಡಂತಿದೆ**

| ಕ್ರಮ ಸಂಖ್ಯೆ | ಶಿಕ್ಷಕರ ಹೆಸರು: ವಿಳಾಸ | ಗೈರು ಹಾಜರಾಗಿರುವ ದಿನಾಂಕ (ಅವಧಿ) |
|---|---|---|
| 1. | ರೋಸಲಿನ್ ಪಿಂಟೋ ಸಮಾಹಿಪ್ರಾಶಾಲೆ, ಎಮ್ಮಿಗನೂರು ಬಳ್ಳಾರಿ ತಾ: (ಪಶ್ಚಿಮ) | ದಿನಾಂಕ:17.02.98 ರಿಂದ ಇಲ್ಲಿಯ ವರೆಗೆ |
| 2. | ಸಿ. ಗೀತಾಬಾಯಿ, ಸಹಿಪ್ರಾಶಾಲೆ, ಡಿ.ಸಿ. ನಗರ, ಬಳ್ಳಾರಿ ಪಶ್ಚಿಮ. | ದಿನಾಂಕ:04.06.2004 ರಿಂದ ಈವರೆಗೆ |
| 3. | ಎನ್. ಅನ್ನಪೂರ್ಣ, ಸಕಿಪ್ರಾಶಾಲೆ, ಹರಿಶ್ಚಂದ್ರ ನಗರ, ಬಳ್ಳಾರಿ ಪಶ್ಚಿಮ. | 02.06.98 ರಿಂದ ಈವರೆಗೆ |
| 4. | ಎಂ.ಎನ್. ವೆಂಕಟೇಶ್, ಸಕಿಪ್ರಾಶಾಲೆ ಮೀನಹಳ್ಳಿ, ಬಳ್ಳಾರಿ ತಾ: | 14.02.2005 ರಿಂದ ಈವರೆಗೆ |
| 5. | ಸುಮಿತ್ರ ಸಹಿಪ್ರಾಶಾಲೆ, ಸುಗ್ಗೇನಹಳ್ಳಿ, ಹೊಸಪೇಟೆ ತಾಲ್ಲೂಕು. | 18.09.2003 ರಿಂದ ಈವರೆಗೆ. |
| 6. | ಬಿ. ಬಸಪ್ಪ ಸಹಿಪ್ರಾಶಾಲೆ, ಹೊಸಮಲಪನ ಗುಡಿ ಹೊಸಪೇಟೆ ತಾಲ್ಲೂಕು. | 11.11.2004 ರಿಂದ ಈ ವರೆಗೆ |
| 7. | ರೋಜಾ ಮೇರಿ, ಸಮಾಹಿಪ್ರಾಶಾಲೆ, ಗಾದಿಗನೂರು, ಹೊಸಪೇಟೆ ತಾಲ್ಲೂಕು. | 01.02.2005 ರಿಂದ ಈವರೆಗೆ. |
| 8. | ಹೆಚ್. ಆಂಜಿನಪ್ಪ, ಸಹಿಪ್ರಾಶಾಲೆ, ಕೆ. ಬೆಳಗಲ್ಲು ಸಿರುಗುಪ್ಪ ತಾಲ್ಲೂಕು. | 01.02.2005. |
| 9. | ಪಾಲಮಣಿನಾರಾಯಣ ಸ್ವಾಮಿ ಸಹಿಪ್ರಾಶಾಲೆ ಪಿಂಜಾರ ಗೇರಿ, ತೆಕ್ಕಲ ಕೋಟೆ, ಸಿರುಗುಪ್ಪ ತಾಲ್ಲೂಕು. | ಅನಧೀಕೃತ ಗೈರು ಹಾಜರಿ ಹಾಗೂ ವಹಿ ತಿದ್ದುವಿಕೆ. |
| 10. | ಹುಸೇನ್ ನಜೀರ್, ಸಹಿಪ್ರಾಶಾಲೆ, ತ್ಯಾಗದ ಹಾಳೆ, ಸೊಂಡೂರು ತಾಲ್ಲೂಕು. | 14.12.2003 ರಿಂದ ಈವರೆಗೆ. |
| 11. | ಹೇಮಣ್ಣ, ಸಹಿಪ್ರಾಶಾಲೆ, ಸಾಸಲವಾಡ, ಕೂಡ್ಲಿಗಿ ತಾಲ್ಲೂಕು. | 16.11.1999 ರಿಂದ ಈವರೆಗೆ. |
| 12. | ಎನ್.ಎಂ. ತಿಪ್ಪೇರುದ್ರಪ್ಪ, ಸಹಿಪ್ರಾಶಾಲೆ, ಬೊರವ್ವನಹಳ್ಳಿ, ಕೂಡ್ಲಿಗಿ ತಾಲ್ಲೂಕು. | 31.01.2002 ರಿಂದ ಈವರೆಗೆ. |
| 13. | ಮಹಾಲಕ್ಷ್ಮಿ ಸಹಿಪ್ರಾಶಾಲೆ, ಬಂಡೇಬಸಾಪುರ, ತಾಂಡ, ಕೂಡ್ಲಿಗಿ ತಾಲ್ಲೂಕು. | ಸತತ ಗೈರು ಹಾಜರಿ. |
| 14. | ಕೆ. ಬಸವರಾಜ, ಸಹಿಪ್ರಾಶಾಲೆ, ಉಬ್ಬಲ ಗುಂಡಿ, ಕೂಡ್ಲಿಗಿ ತಾಲ್ಲೂಕು. | 11.08.2003 ಕಾಣೆಯಾಗಿರುವ ಪ್ರಕರಣ. |
| 15. | ಎಂ. ಶ್ರೀ ಶೈಲ, ಚಿತ್ರಕಲಾ ಶಿಕ್ಷಕರು, ಸಪಪೂಕಾ, ಹಗರಿಬೊಮ್ಮನಹಳ್ಳಿ. | 06.04.2002 ರಿಂದ ಸತತ ಗೈರು ಹಾಜರಿ. |

ಈ ಮೇಲ್ಕಂಡ ಶಿಕ್ಷಕರುಗಳು ರಾಜ್ಯಪತ್ರದಲ್ಲಿ ಪ್ರಕಟಗೊಂಡ 30 ದಿನದೊಳಗಾಗಿ ಈ ಕಛೇರಿಗೆ ಸಂಪರ್ಕಿಸಿ ಸೂಕ್ತ ಸಮಜಾಯಿಷಿ ನೀಡದೇ ಇದ್ದ ಪಕ್ಷದಲ್ಲಿ ನಿಯಮಾನುಸಾರ ಕರ್ತವ್ಯದಿಂದ ತೆಗೆದು ಹಾಕಲಾಗುವುದು ಎಂದು ಈ ಮೂಲಕ ತಿಳಿಸಲಾಗಿದೆ.

ಉಪ ನಿರ್ದೇಶಕರು,

ಪಿ.ಆರ್.1535

ಸಾರ್ವಜನಿಕ ಶಿಕ್ಷಣ ಇಲಾಖೆ, ಬಳ್ಳಾರಿ.

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ದೊಡ್ಡಬಳ್ಳಾಪುರ ಉಪವಿಭಾಗ, ದೊಡ್ಡಬಳ್ಳಾಪುರ

## ಸಂಖ್ಯೆ: ಎಆರ್-47/ ವಿ.ನೇ/ 06/ 2005-06, ದಿನಾಂಕ:10ನೇ ಅಕ್ಟೋಬರ್, 2006

**ವಿಷಯ:** ಎಂ. ಸತ್ಯವಾರ, ಹಾ.ಉ. ಸ.ಸಂ. (ನಿ) ಹೊಸಕೋಟೆ ತಾಲ್ಲೂಕು ಸಂಘಕ್ಕೆ ಕಲಂ 31(1)ರಡಿ ವಿಶೇಷಾಧಿಕಾರಿಯನ್ನು ನೇಮಕ ಮಾಡುವ ಬಗ್ಗೆ.

**ಉಲ್ಲೇಖ:** (1) ಸಂಘದ ಐದು ಜನ ನಿರ್ದೇಶಕರುಗಳ ರಾಜೀನಾಮೆ ದಿನಾಂಕ:08.09.2006, 09.09.2006 ಮತ್ತು 10.09.2006.

(2) ಸಹಕಾರ ಅಭಿವೃದ್ಧಿ ಅಧಿಕಾರಿ, ಹೊಸಕೋಟೆ ಸ.ಅ.ಅ. ಹೋ/ 18/ 2006-07, ದಿನಾಂಕ:28.09.2006.

(3) ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ/ ಸಿಎಲ್ಎಂ/ 69/ 2001 ದಿನಾಂಕ:21.11.2001.

**ಪ್ರಸ್ತಾವನೆ:**

ಎಂ. ಸತ್ಯವಾರ ಹಾ.ಉ. ಸ.ಸಂ.(ನಿ) ಹೊಸಕೋಟೆ ತಾಲ್ಲೂಕು ಇದರ 9 ಜನ ಆಡಳಿತ ಮಂಡಳಿಯ ಸದಸ್ಯರುಗಳಲ್ಲಿ 5 ಜನ ನಿರ್ದೇಶಕರುಗಳು ತಮ್ಮ ಸ್ಥಾನಗಳಿಗೆ ರಾಜಿನಾಮೆ ನೀಡಿರುವುದರಿಂದ ಸಮಿತಿ ಸದಸ್ಯರ ಸಂಖ್ಯೆಯು ಸಭೆಯ ಅವಶ್ಯಕ ಸಂಖ್ಯೆ (ಕೋರಂ)ಗೆ ಅಗತ್ಯವಾದಷ್ಟು ಸಂಖ್ಯೆಯಲ್ಲಿ ಇಲ್ಲದೆ ಶೂನ್ಯವಾಗಿರುವುದರಿಂದ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 31ರಡಿ ಸದರಿ ಸಂಘಕ್ಕೆ ವಿಶೇಷಾಧಿಕಾರಿಯ ನೇಮಕ ಅವಶ್ಯಕವಾಗಿರುತ್ತದೆ. ಹಾಗೂ ವಿಶೇಷಾಧಿಕಾರಿ ನೇಮಕಾತಿ ಪೂರ್ವದಲ್ಲಿದ್ದ ಆಡಳಿತ ಮಂಡಳಿಯ ಸದಸ್ಯರುಗಳು ಕಲಂ 29ಸಿ (ಓ) (iii)ಕ್ಕೆ ಒಳಪಡುತ್ತಾರೆ. ಈ ಮೇಲ್ಕಂಡ ಎಲ್ಲಾ ಅಂಶಗಳನ್ನು ಪರಿಗಣಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

ಹಿದಾಯತ್-ಉಲ್ಲಾ-ಖಾನ್ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದೊಡ್ಡಬಳ್ಳಾಪುರ ಉಪವಿಭಾಗ, ದೊಡ್ಡಬಳ್ಳಾಪುರ ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 31(1)ರ ಪ್ರಕಾರ ಹಾಗೂ ಉಲ್ಲೇಖಿತ (3)ರ ಸರ್ಕಾರದ ಅಧಿಸೂಚನೆಯನ್ವಯ ದತ್ತವಾದ ಅಧಿಕಾರವನ್ನು ಚಲಾಯಿಸಿ ಎಂ. ಸತ್ಯವಾರ ಹಾಲು ಉತ್ಪಾದಕರ ಸಹಕಾರ ಸಂಘ ನಿಯಮಿತ ಹೊಸಕೋಟೆ ತಾಲ್ಲೂಕು ಇದಕ್ಕೆ ವಿಶೇಷಾಧಿಕಾರಿಗಳನ್ನಾಗಿ 6 ತಿಂಗಳ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆವಿಗೆ ಮಾರ್ಗ ವಿಸ್ತರಣಾಧಿಕಾರಿಗಳು ಹಾಲು ಉತ್ಪಾದಕರ ಸಹಕಾರ ಸಂಘಗಳ ಒಕ್ಕೂಟ, ಹೊಸಕೋಟೆ ಶಿಬಿರ ಇವರನ್ನು ನೇಮಕ ಮಾಡಿರುತ್ತೇನೆ.

ವಿಶೇಷಾಧಿಕಾರಿಗಳು ಈ ಆದೇಶದ ದಿನಾಂಕದಿಂದ 6 ತಿಂಗಳ ಅವಧಿಯೊಳಗೆ ಸಂಘದ ಆಡಳಿತ ಮಂಡಳಿಗೆ ಚುನಾವಣೆ ನಡೆಸಿ ಹೊಸದಾಗಿ ರಚಿತವಾಗುವ ಆಡಳಿತ ಮಂಡಳಿಗೆ ಅಧಿಕಾರ ವಹಿಸಿಕೊಡಲು ಆದೇಶಿಸಿದೆ.

ವಿಶೇಷಾಧಿಕಾರಿಗಳು ಸಂಘದ ಆಡಳಿತ ಮಂಡಳಿಯ ಪ್ರಭಾರವನ್ನು ವಹಿಸಿಕೊಂಡು ಆಡಳಿತ ಮಂಡಳಿಯ ಎಲ್ಲಾ ಕರ್ತವ್ಯಗಳನ್ನು ಸಹಕಾರ ಸಂಘಗಳ ಕಾಯ್ದೆ ನಿಯಮ ಮತ್ತು ಸಂಘದ ಉಪ ನಿಯಮಗಳ ಪ್ರಕಾರ ಕಾರ್ಯ ನಿರ್ವಹಿಸಲು ಆದೇಶಿಸಿದೆ. ವಿಶೇಷಾಧಿಕಾರಿಗಳು ಈ ಕಛೇರಿಯ ನಿಯಂತ್ರಣಕ್ಕೆ ಒಳಪಟ್ಟು ಕೆಲಸ ನಿರ್ವಹಿಸುವುದು.

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಹಾಗೂ ಕಛೇರಿಯ ಮುದ್ರೆಯೊಂದಿಗೆ ಇಂದು ದಿನಾಂಕ:10ನೇ ಅಕ್ಟೋಬರ್, 2006ರಂದು ಹೊರಡಿಸಿರುತ್ತೇನೆ.

**ಹಿದಾಯತ್ ಉಲ್ಲಾ ಖಾನ್**

ಪಿ.ಆರ್.1536

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ದೊಡ್ಡಬಳ್ಳಾಪುರ ಉಪವಿಭಾಗ, ದೊಡ್ಡಬಳ್ಳಾಪುರ.

## COMMERCIAL TAXES DEPARTMENT

## PROCEEDINGS OF THE COMMISSIONER OF COMMERCIAL TAXES, (KARNATAKA), BANGALORE-CLARIFICATION UNDER SECTION 59(4) OF THE KARNATAKA VALUE ADDED TAX ACT, 2003

**Sub:** KVAT Act 2003- Clarification under Section 59(4) regarding rate of tax applicable on all kinds of "retreaded tyres".

**Ref:** Application Dated:04.09.2006 of General's New Tread, 31/32, J.C. Road, Bangalore-560 002.

In his application cited at reference above, the applicant has sought clarification regarding rate of tax applicable on all kinds of "retreaded tyres".

(2) Section 59(4) of the Karnataka Value Added Tax Act, 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purposes of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

(3) Hence the following clarification is issued.

**Clarification No. CLR CR 25/ 06-07, Dated:6th October, 2006**

It is hereby clarified that all kinds of "retreaded tyres" are taxable at 12.5% under Section 4(1)(b) of the Karnataka Value Added Tax Act, 2003.

**B.A. HARISH GOWDA**

PR-1537

Commissioner of Commercial Taxes,
(Karnataka), Bangalore.

## COMMERCIAL TAXES DEPARTMENT

## PROCEEDINGS OF THE COMMISSIONER OF COMMERCIAL TAXES, (KARNATAKA), BANGALORE-CLARIFICATION UNDER SECTION 59(4) OF THE KARNATAKA VALUE ADDED TAX ACT, 2003

**Sub:** KVAT Act 2003- Clarification under Section 59(4) regarding rate of tax applicable on "printed materials" and some of the "Stationery articles".

**Ref:** Application Dated:01.09.2006 of M/s Srinivasa Printing Press, No.7/1, 53 'A' Cross, III Block, Rajajinagar, Bangalore-560 010.

In his application cited at reference above, the applicant has sought clarification regarding rate of tax applicable on "printed materials" and "Stationery articles".

(2) Section 59(4) of the Karnataka Value Added Tax Act, 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purposes of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

(3) Hence the following clarification is issued.

**Clarification No. CLR. CR. 141/ 06-07, Dated:10th October, 2006**

It is hereby clarified that the rate of tax on the following commodities are as follows:

| Sl. No. | Commodity | Rate of tax for sales within the State |
|---|---|---|
| 1. | Envelopes | 4% as per Sl.No.71 of Third Schedule to the Karnataka Value Added Tax Act, 2003. |
| 2. | Covers | 4% as per Sl.No.71 of Third Schedule to the Karnataka Value Added Tax Act, 2003. |
| 3. | Reading books | Exempted as per Sl.No.11 of the First Schedule to the Karnataka Value Added Tax Act, 2003. |
| 4. | Brouchers | 4% as per Sl.No.71 of Third Schedule to the Karnataka Value Added Tax Act, 2003. |
| 5. | Catalogues | 4% as per Sl.No.71 of Third Schedule to the Karnataka Value Added Tax Act, 2003. |
| 6. | Accounts books | 4% as per Sl.No.71 of Third Schedule to the Karnataka Value Added Tax Act, 2003. |
| 7. | Invitation cards | 4% as per Sl.No.71 of Third Schedule to the Karnataka Value Added Tax Act, 2003. |
| 8. | Printed materials | 4% as per Sl.No.71 of Third Schedule to the Karnataka Value Added Tax Act, 2003. |

**B.A. HARISH GOWDA**
Commissioner of Commercial
Taxes, (Karnataka), Bangalore.

PR-1538

## ಸಹಕಾರ ಸಂಘಗಳ ಸಹಾಯಕ ನಿಬಂಧಕರವರು, ದಾವಣಗೆರೆಜಿಲ್ಲೆ, ದಾವಣಗೆರೆ ಇವರ ಕಛೇರಿಯ ನಡವಳಿಕೆಗಳು

**ವಿಷಯ:** ಸಮಾಪನೆಗೊಂಡಿರುವ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಮಾದಿಹಳ್ಳಿ, ಹರಪನಹಳ್ಳಿ ತಾಲ್ಲೂಕು, ಇದರ ನೋಂದಣಿಯನ್ನು ರದ್ದುಪಡಿಸುವ ಕುರಿತು.

**ಉಲ್ಲೇಖ:** (1) ಈ ಕಛೇರಿ ಸಮಸಂಖ್ಯೆ ಆದೇಶ ದಿನಾಂಕ:15.12.2005.

(2) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಹರಪನಹಳ್ಳಿ ಇವರ ಪತ್ರ ದಿನಾಂಕ:23.09.2006.

**ಪ್ರಸ್ತಾವನೆ:**

ಮೇಲ್ಕಂಡ ವಿಷಯ ಮತ್ತು ಉಲ್ಲೇಖಗಳಿಗೆ ಸಂಬಂಧಿಸಿದಂತೆ, ಈ ಮೇಲ್ಕಂಡ ಸಹಕಾರ ಸಂಘವು ಕ್ರಮ ಸಂಖ್ಯೆ: ಎಆರ್/ 23/ 20450/ 95-96 ದಿನಾಂಕ:30.03.1996 ರಲ್ಲಿ ನೋಂದಣಿಯಾಗಿರುತ್ತದೆ. ಸಂಘದ ಕಾರ್ಯಚಟುವಟಿಕೆಗಳು ಪೂರ್ಣವಾಗಿ ಸ್ಥಗಿತಗೊಂಡಿದ್ದರಿಂದ, ಈ ಸಂಘವನ್ನು ಮುಂದುವರಿಸಿಕೊಂಡು ಹೋಗುವುದು ಸೂಕ್ತವಲ್ಲವೆಂದು ಭಾವಿಸಿ, ಉಲ್ಲೇಖ (1)ರ ಆದೇಶದಲ್ಲಿ ಸಮಾಪನೆಗೊಳಿಸಿ ಸಹಕಾರ ಅಭಿವೃದ್ಧಿ ಅಧಿಕಾರಿ, ಹರಪನಹಳ್ಳಿ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ಸಮಾಪನಾಧಿಕಾರಿಗಳು ಸಂಘದ ಆಸ್ತಿ ಮತ್ತು ಜವಾಬ್ದಾರಿಗಳನ್ನು ವಿಲೇಮಾಡಿ ಶೂನ್ಯಗೊಳಿಸಿ ಸಂಘದ ನೋಂದಣಿಯನ್ನು ರದ್ದುಗೊಳಿಸಲು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಹರಪನಹಳ್ಳಿ ಉಪ ವಿಭಾಗ, ಹರಪನಹಳ್ಳಿ ಇವರ ಮೂಲಕ ಉಲ್ಲೇಖ (2)ರ ರೀತ್ಯಾ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಹರಪನಹಳ್ಳಿ ಇವರೂ ಸಹ ಈ ಸಂಘದ ನೋಂದಣಿಯನ್ನು ರದ್ದುಪಡಿಸಲು ಶಿಫಾರಸ್ಸು ಮಾಡಿರುತ್ತಾರೆ. ಈ ಅಂಶಗಳನ್ನು ಪರಿಗಣಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

## ಆದೇಶ

## ಸಂಖ್ಯೆ: ಡಿಆರ್:ಡಿವಿಜಿ:ಎಲ್‌ಕ್ಯೂಡಿ: ಸಿಆರ್-08/ 2005-06, ದಿನಾಂಕ:29ನೇ ಸೆಪ್ಟೆಂಬರ್, 2006

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಗಣಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ: 69: ಸಿಎಲ್ಎ: 2001, ದಿನಾಂಕ:21.11.2001ರ ಪ್ರಕಾರ ದತ್ತವಾದ ಅಧಿಕಾರದನ್ವಯ ದಾವಣಗೆರೆ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರು, ಬಿ. ಕುಬೇರಪ್ಪ, ಕೆ.ಸಿ.ಎಸ್. ಆದ ನಾನು ಸಮಾಪನೆಗೊಂಡ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಮಾದಿಹಳ್ಳಿ ಹರಪನಹಳ್ಳಿ ತಾಲ್ಲೂಕು, ಇದರ ನೋಂದಣಿಯನ್ನು ರದ್ದುಗೊಳಿಸಿ ಆದೇಶ ಹೊರಡಿಸಿರುತ್ತೇನೆ.

ಈ ರದ್ದತಿಯ ಆದೇಶದ ದಿನಾಂಕದಿಂದ ಸದರಿ ಸಹಕಾರ ಸಂಘದ ಕಾರ್ಯ ಚಟುವಟಿಕೆಗಳು ನಿಂತು ಹೋಗಿರುತ್ತವೆಂದು ಭಾವಿಸಲ್ಪಡತಕ್ಕದ್ದು. ಈ ಸಂಘವು ಅಸ್ತಿತ್ವದಲ್ಲಿರುವುದಿಲ್ಲವೆಂದು ಪರಿಗಣಿಸತಕ್ಕದ್ದು ಹಾಗೂ ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960ರ ನಿಯಮ 33(ಎನ್) ರನ್ವಯ ಈ ಸಂಘದ ದಾಖಲಾತಿಗಳನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಹರಪನಹಳ್ಳಿ ಇವರ ಕಛೇರಿಯಲ್ಲಿಡಲು ಆದೇಶಿಸಿದೆ.

ನನ್ನ ಸ್ವಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ:29.09.2006 ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪನಿಬಂಧಕರು,

ಪಿ.ಆರ್.1539 ದಾವಣಗೆರೆ ಜಿಲ್ಲೆ, ದಾವಣಗೆರೆ.

## ಸಹಕಾರ ಸಂಘಗಳ ಉಪ ನಿಬಂಧಕರವರು, ದಾವಣಗೆರೆಜಿಲ್ಲೆ, ದಾವಣಗೆರೆ ಇವರ ಕಛೇರಿಯ ನಡವಳಿಕೆಗಳು

**ವಿಷಯ:** ಸಮಾಪನೆಗೊಂಡಿರುವ ಗೃಹ ನಿರ್ಮಾಣ ಸಹಕಾರ ಸಂಘ ನಿ., ನ್ಯಾಮತಿ, ಹೊನ್ನಾಳಿ ತಾಲ್ಲೂಕು, ಇದರ ನೋಂದಣಿಯನ್ನು ರದ್ದುಪಡಿಸುವ ಕುರಿತು.

**ಉಲ್ಲೇಖ:** (1) ಈ ಕಛೇರಿ ಸಮಸಂಖ್ಯೆ ಆದೇಶ ದಿನಾಂಕ:13.09.2006.

(2) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಪ್ರಸ್ತಾವನೆ ದಿನಾಂಕ:05.10.2006.

**ಪ್ರಸ್ತಾವನೆ:**

ಮೇಲ್ಕಂಡ ವಿಷಯ ಮತ್ತು ಉಲ್ಲೇಖಗಳಿಗೆ ಸಂಬಂಧಿಸಿದಂತೆ, ಈ ಮೇಲ್ಕಂಡ ಸಹಕಾರ ಸಂಘವು ಕ್ರಮ ಸಂಖ್ಯೆ: 1129 ದಿನಾಂಕ:25.07.1965 ರಲ್ಲಿ ನೋಂದಣಿಯಾಗಿರುತ್ತದೆ. ಸಂಘದ ಕಾರ್ಯಚಟುವಟಿಕೆಗಳು ಪೂರ್ಣವಾಗಿ ಸ್ಥಗಿತಗೊಂಡಿದ್ದರಿಂದ, ಈ ಸಂಘವನ್ನು ಮುಂದುವರಿಸಿಕೊಂಡು ಹೋಗುವುದು ಸೂಕ್ತವಲ್ಲವೆಂದು ಭಾವಿಸಿ, ಉಲ್ಲೇಖ (1)ರ ಆದೇಶದಲ್ಲಿ ಸಮಾಪನೆಗೊಳಿಸಿ ಸಹಕಾರ ಅಭಿವೃದ್ಧಿ ಅಧಿಕಾರಿ, ಹೊನ್ನಾಳಿ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ಸಮಾಪನಾಧಿಕಾರಿಗಳು ಸಂಘದ ಆಸ್ತಿ ಮತ್ತು ಜವಾಬ್ದಾರಿಗಳನ್ನು ವಿಲೇಮಾಡಿ ಶೂನ್ಯಗೊಳಿಸಿ ಸಂಘದ ನೋಂದಣಿಯನ್ನು ರದ್ದುಗೊಳಿಸಲು ಸಹಕಾರ ಅಭಿವೃದ್ಧಿ ಅಧಿಕಾರಿ ಹೊನ್ನಾಳಿ ಇವರು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಮೂಲಕ ಉಲ್ಲೇಖ (2)ರ ರೀತ್ಯಾ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರು ಸಹ ಸಂಘದ ನೋಂದಣಿಯನ್ನು ರದ್ದುಪಡಿಸಲು ಶಿಫಾರಸ್ಸು ಮಾಡಿರುತ್ತಾರೆ. ಈ ಅಂಶಗಳನ್ನು ಪರಿಗಣಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

## ಆದೇಶ

## ಸಂಖ್ಯೆ: ಡಿಆರ್:ಡಿವಿಜಿ:ಎಲ್‌ಕ್ಯೂಡಿ: ಸಿಆರ್-25/ 2006-07, ದಿನಾಂಕ:12ನೇ ಅಕ್ಟೋಬರ್, 2006

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಗಣಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ: 69: ಸಿಎಲ್ಎ: 2001, ದಿನಾಂಕ:21.11.2001ರ ಪ್ರಕಾರ ದತ್ತವಾದ ಅಧಿಕಾರದನ್ವಯ ದಾವಣಗೆರೆ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರು, ಬಿ. ಕುಬೇರಪ್ಪ, ಕೆ.ಸಿ.ಎಸ್. ಆದ ನಾನು ಸಮಾಪನೆಗೊಂಡ ಗೃಹ ನಿರ್ಮಾಣ ಸಹಕಾರ ಸಂಘ ನಿ., ನ್ಯಾಮತಿ ಹೊನ್ನಾಳಿ ತಾಲ್ಲೂಕು, ಇದರ ನೋಂದಣಿಯನ್ನು ರದ್ದುಗೊಳಿಸಿ ಆದೇಶ ಹೊರಡಿಸಿರುತ್ತೇನೆ.

ಈ ರದ್ದತಿಯ ಆದೇಶದ ದಿನಾಂಕದಿಂದ ಸದರಿ ಸಹಕಾರ ಸಂಘದ ಕಾರ್ಯ ಚಟುವಟಿಕೆಗಳು ನಿಂತು ಹೋಗಿರುತ್ತವೆಂದು ಭಾವಿಸಲ್ಪಡತಕ್ಕದ್ದು. ಈ ಸಂಘವು ಅಸ್ತಿತ್ವದಲ್ಲಿರುವುದಿಲ್ಲವೆಂದು ಪರಿಗಣಿಸತಕ್ಕದ್ದು ಹಾಗೂ ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960ರ ನಿಯಮ 33(ಎನ್) ರನ್ವಯ ಈ ಸಂಘದ ದಾಖಲಾತಿಗಳನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಹರಪನಹಳ್ಳಿ ಇವರ ಕಛೇರಿಯಲ್ಲಿಡಲು ಆದೇಶಿಸಿದೆ.

ನನ್ನ ಸ್ವಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ:12.10.2006 ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪನಿಬಂಧಕರು,

ಪಿ.ಆರ್.1540 ದಾವಣಗೆರೆ ಜಿಲ್ಲೆ, ದಾವಣಗೆರೆ.

## ಪೊಲೀಸ್ ಇನ್ಸ್‌ಪೆಕ್ಟರ್, ಸಂಜಯನಗರ ಪೊಲೀಸ್ ಠಾಣೆ, ಬೆಂಗಳೂರು-560 094

**ವಿಷಯ:** ವಾರಸುದಾರರಿಲ್ಲದ ವಾಹನಗಳ ವಿವರವನ್ನು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಿಸಲಾಗಿದೆ.

ಈ ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ ಸಂಜಯನಗರ ಪೊಲೀಸ್ ಠಾಣಾ ಸರಹದ್ದಿನಲ್ಲಿ ವಾರಸುದಾರರಿಲ್ಲದ ಈ ಕೆಳಕಂಡ ದ್ವಿಚಕ್ರವಾಹನಗಳನ್ನು ಅಮಾನತುಪಡಿಸಿಕೊಂಡಿದ್ದು ಈ ವಾಹನಗಳ ವಾರಸುದಾರರನ್ನು ಪತ್ತೆ ಮಾಡುವ ಸಲುವಾಗಿ ಬೆಂಗಳೂರು ನಗರದ ಎಲ್ಲಾ ಠಾಣೆಗಳಿಗೆ ಸುತ್ತೋಲೆಯನ್ನು ಕಳುಹಿಸಿದ್ದು ವಾರಸುದಾರರು ಪತ್ತೆಯಾಗಿರುವುದಿಲ್ಲ.

ವಾಹನಗಳ ವಿವರ ಕೆಳಕಂಡಂತೆ ಇರುತ್ತದೆ.

| | | | | |
|---|---|---|---|---|
| 1. | ಹೀರೋಹೊಂಡಾ ಸ್ಪೆಂಡರ್ | ಎಪಿ-26-ಸಿ-999 | ENG No.02F18M26821 CHA. No.02F20C27872 | ಸಿಮೀಸ್ ನಂ.222/05, ಪಿಎಫ್ ನಂ.43/05. |
| 2. | ಯಮಹಾ ಆರ್.ಎಕ್ಸ್ 100 | ಸಿಎಜಡ್ಜ್ 1832 | ENG No.TDTA 95058 CHA. No.ILI095058 | ಸಿಮೀಸ್ ನಂ.129/04, ಪಿಎಫ್ ನಂ.20/04. |
| 3. | ಬುಲೇಟ್ | ಡಬ್ಲ್ಯೂಎಂ.ಪಿ.6601 | ENG No.205053 CHA. No.B 205053 | ಸಿಮೀಸ್ ನಂ.129/04, ಪಿಎಫ್ ನಂ.20/04. |
| 4. | ಕವಾಸಕಿ ಬಜಾಜ್ | ಕೆಎ-01-ಎಲ್-2625 | ENG No.DBM 96JO3514 CHA. No.UBF96003233 | ಸಿಮೀಸ್ ನಂ.129/04, ಪಿಎಫ್ ನಂ.20/04. |
| 5. | ಬಜಾಜ್ ಚೇತಕ್ | ಸಿಕೆಕೆ 7040 | ENG No.WOEE108023 | ಸಿಮೀಸ್ ನಂ.129/04, ಪಿಎಫ್ ನಂ.20/04. |
| 6. | ಹೊಂಡಾ ಆಕ್ಟಿವ್ | ಕೆಎ-03-ಇಎಲ್-2104 | CHA. No. ME4JF085238314928 ENG No.JF08E0323584 | ಸಿಮೀಸ್ ನಂ.207/06, ಪಿಎಫ್ ನಂ.44/06. |

ಪೊಲೀಸ್ ಇನ್ಸ್‌ಪೆಕ್ಟರ್,
ಸಂಜಯನಗರ ಪೊಲೀಸ್ ಠಾಣೆ,
ಬೆಂಗಳೂರು-560 094.

ಪಿ.ಆರ್.1541

**PROCEEDINGS OF THE DISTRICT AND SESSIONS COURT, GULBARGA**
**(Competent Authority under Rule 4 of Notaries Rules 1956)**

**Sub:** Appointment of Notary for Aland Taluka-reg.

**Ref:** 1) Government of Karnataka Letter No. LAW 145 LCL 2006 Dated:29.08.2006 permitting to this office to call for applications from the eligible Advocates for the post of Notary.
2) District Court Gulbarga Notification No.1/ 2006 Dated:20.09.2006.
3) Office Note Dated: 13.10.2006 and orders passed thereon.

It is hereby brought to the notice of public that the following Advocates have submitted their memorial for appointment of notary for Aland Taluka in Gulbarga District.

1) Sri Abhimanyu C. Tole, Advocate, Aland.
2) Sri Bhosge Srinivas, Advocate, Aland.
3) Smt. Laxmi Nagesh Reddy, Advocate.
4) Smt. Deeparani. B. Kulkarni, Advocate, Aland.

Therefore persons having any objections for appointment of above Advocates as notary for Aland Taluka may submit their objections to the undersigned within 15 days from the date of publication of this notice in the official Gazette.

Place: Gulbarga.
Dated:18.10.2006.

**B.A. MUCHANDI**
Prl.District & Sessions Judge, Gulbarga.

PR-1542

**IN THE COURT IF THE 9TH ADDL. CHIEF METROPOLITAN MAGISTRATE, BANGALORE CITY**

It is hereby notified for the information of the public that the under mentioned two wheelers which are in the custiody of Kalasipalya Police Station, Bangalore City as unclaimed shall be confiscated to the Government and displsed of according to law if not claimed by the owner with proof of ownership within six month of the publication of this notification.

| Sl. No. | Crime No. | PF No. | Type & Engine No. & Chasis No. | Make of the vehicles |
|---|---|---|---|---|
| 1. | 447/ 99 U/S 379 IPC | PF No.165/ 99 | KA07E9734 KE01L2032. Eng & Chas No are not readable | 1. TVS-50 2. TVS-50 |
| 2. | C-Miss No. 781/01 | PF No.206/01 | CKK 7160 1908M18887 1908M189887 | SUZUKI M/C |
| 3. | C-Miss No.776/01 | PF No.205/01 | KA05 H 1192 F128333 | KINETCI HONDA |
| 4. | C-Miss No.775/01 | PF No.204/01 | KA05K2545 ---78379 | HERO PUCH |

| Sl. No. | Crime No. | PF No. | Type & Engine No. & Chasis No. | Make of the vehicles |
|---|---|---|---|---|
| 5. | C-Miss No. 771/ 01 | PF No.203/01 | KA03V7002<br>7802M022267<br>78021975132 | SUZUKI M/C |
| 6. | C-Miss No.770/01 | PF No.202/01 | CAV 2571<br>-- 3602F044300 | SUZUKI M/C |
| 7. | C-Miss No.766/01 | PF No.201/01 | MYY 8374<br>IJB 250 003794<br>003794004055 | YEZDI M/C |
| 8. | C-Miss No. 765/01 | PF No.200/01 | MEL 1453<br>03E111-025063<br>03C111-025279 | BAJAJ 150 |
| 9. | C-Miss No.762/01 | PF No.198/01 | CAX 1919<br>---<br>46189408-86 | TVS 50 |
| 10. | C-Miss No. 761/01 | PF No.197/01 | CKD 4316<br>05F-188358<br>050-195683 | BAJAJ SUPER |
| 11. | 38/01 U/S 379 IPC | PF No.72/02 | KA01 S 743<br>Eng & Chas No. are not readable | HEREO-HONDA SPLENDER |
| 12. | 600/ 02 U/S 41 C1(d)R/W 102 CrPC. | PF No.271/02 | No. REG NUMBER<br>96F10E02933<br>96F12F01825 | HEREO-HONDA |
| 13. | 177/02 U/S 379 IPC | PF No.58/02 | CKO 2673<br>Eng & Chas No. are not readable | KINETIC-HONDA |
| 14. | 151/02 U/S41(d) R/W 102 Cr.PC. | PF No.43/02 | KA02E-5132<br>A007M371525<br>A007P376546 | TVS-50 |
| 15. | C-Miss No.34/03 | PF No.07/03 | KA01L4165<br>Not Readable | TVS-50<br>---- |
| 16. | 74/03 U/S 379 IPC | PF No.29/03 | CKR 9012<br>W06E040638<br>06004048 | BAJAJ CHETHK |
| 17. | 103/06 U/S<br>41C1(d)Cr.PC<br>379 IPC | | KA17M7341<br>G10B1NH488209<br>MA3EYE31500505676<br>KA25 S4362<br>04F15E14439<br>04F16F14458 | 1. Maruthi Zen<br><br><br>2. HERO-HONDA |
| 18. | 64/06 U/S<br>379 IPC | PF No.20/06 | 1. Kawasaki Bajaj<br>No.KA-02-H-1010.<br>2. Kinetic Honda<br>CRW-4324. | E30BL016486<br>30LB016689<br>056770NIED<br>EM058629 |
| 19. | 64/06 U/S<br>379 IPC | PF No.2106 | 1. Kinetic Honda<br>No. KA-01-J-497<br>2. Bajaj Chethak CIY 8349 | NIEJ1380860<br>----<br>06e993288 |
| 20. | 766/ 06 U/S<br>379 IPC | PF No.258/06 | 1. TVS-XL-Super<br>TN-29-E-6277<br>2. Suzuki, Samurai<br>KA04-EB-7288<br>3. Suzuki Max-100<br>TN-29-YE-4249 | P1304M746112<br>P10F758918<br>712F094403<br>7112M149722<br>M134993<br>A508F151499 |

| Sl. No. | Crime No. | PF No. | Type & Engine No. & Chasis No. | Make of the vehicles |
|---|---|---|---|---|
| 21. | 225/06 U/S 41 C1(d) & 102 CrPC R/W 379 IPC | PF No.83/06 | TN 29F 2822 Q3E18E3652 03E20F39098 | 1 Hereo-Honda M/C. |
| 22. | 225/06 U/S 41 C1(d) & 102 CrPC R/W 379 IPC | PF No.84/06 | KA05EV 9882 04G15MO1981 04G16CO3551 | Hereo-Honda Splender. |
| 23. | 249/05 | | KA04W5799E42M00386 01046C01388 | CBZ Hero-Honda |
| 24. | 369/05 U/S 379 IPC | PF No.94/05 | DDD08745 ILI087455 | YAMAHA |
| 25. | 369/05 U/S 379 IPC | PF No.95/05 | E30CKO50213 C300K050994 | KAWASAKI BAJAJ |
| 26. | 369/ 05 U/S 379 IPC | PF No.249/05 | KA04W57 99E42MOO386 01046C01388 | HERO HONDA-CBZ |
| 27. | 285/05 U/S 41 C1(d) 102 CrPC R/W 379 IPC | | CKN 4193 DDD08745 ILI087455 | YAMAHA M/C |
| 28. | 285/05 U/S 41 C1(d) 102 CrPC R/W 379 IPC | PF No.95/05 | KA02H7035 F30CKO50213 C300K050994 | Kawasaki Bajaj M/C. |

By the Court Order,
Sheristedar, Ist Additional
C.M.M. Court, Bangalore City.

PR-1543

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

## ಅಧಿಕೃತ ಜ್ಞಾಪನ

### ನಂ:ಎಲ್.ಎನ್.ಡಿ.(ಎನ್) ಸಿ.ಆರ್.413/ 05-06, ಬೆಂಗಳೂರು, ದಿನಾಂಕ:20ನೇ ಸೆಪ್ಟೆಂಬರ್, 2006

**ವಿಷಯ:** ಬೆಂಗಳೂರು ಉತ್ತರ ತಾಲ್ಲೂಕು, ಯಶವಂತಪುರ ಹೋಬಳಿ, ಹೇರೋಹಳ್ಳಿ ಗ್ರಾಮದ ಸ.ನಂ.63ರಲ್ಲಿ 1.00 ಎಕರೆ ಜಮೀನನ್ನು ಸಾರ್ವಜನಿಕ ಸ್ಮಶಾನಕ್ಕಾಗಿ ಮೀಸಲಿಡುವ ಬಗ್ಗೆ.

**ಉಲ್ಲೇಖ:** ಸರ್ಕಾರದ ಪತ್ರದ ಸಂಖ್ಯೆ: ಆರ್.ಡಿ.6 ಎಲ್.ಜಿ.ಬಿ. 2004, ದಿನಾಂಕ:07.06.2006.

ಬೆಂಗಳೂರು ಉತ್ತರ ತಾಲ್ಲೂಕು, ಯಶವಂತಪುರ ಹೋಬಳಿ, ಹೇರೋಹಳ್ಳಿ ಗ್ರಾಮದ ಸ.ನಂ.63ರಲ್ಲಿ 20.00 ಎಕರೆ ಜಮೀನನ್ನು ಶ್ರೀ ಸುಬ್ರಮಣ್ಯ ಎಜುಕೇಷನ್ ಸೊಸೈಟಿರವರಿಗೆ ಸರ್ಕಾರಿ ಆದೇಶ ಕ್ರಮಾಂಕ ಆರ್.ಡಿ.250 ಎಲ್.ಜಿ.ಬ.91, ದಿನಾಂಕ:24.06.1992 ರನ್ವಯ 30 ವರ್ಷಗಳಿಗೆ ಗುತ್ತಿಗೆ ಆಧಾರದ ಮೇಲೆ ಮಂಜೂರು ಮಾಡಲಾಗಿರುತ್ತದೆ. ತದನಂತರ ಸರ್ಕಾರದ ಪತ್ರದ ಸಂಖ್ಯೆ: ಆರ್‌ಡಿ357 ಎಲ್.ಜಿ.ಬಿ. 2002, ದಿನಾಂಕ:20.08.2003ರಲ್ಲಿ ಅರ್ಜಿತ ಸಂಸ್ಥೆಗೆ ಗುತ್ತಿಗೆಗೆ ನೀಡಲಾಗಿರುವ ಹೇರೋಹಳ್ಳಿ ಸ.ನಂ.63ರಲ್ಲಿ 20.00 ಎಕರೆ ಜಮೀನಿನ ಪೈಕಿ 8.00 ಎಕರೆ ಜಮೀನನ್ನು ಮಂಜೂರು ಮಾಡಲಾಗಿರುತ್ತದೆ.

ಸುಬ್ರಮಣ್ಯ ಎಜುಕೇಷನ್ ಸೊಸೈಟಿ ರವರಿಗೆ ಗುತ್ತಿಗೆ ನೀಡಲಾಗಿರುವ 20.00 ಎಕರೆ ಪ್ರದೇಶಗಳ ಪೈಕಿ ಗ್ರಾಮಸ್ಥರು 1.00 ಎಕರೆಯನ್ನು ಸ್ಮಶಾನಕ್ಕಾಗಿ ಕಾಯ್ದಿರಿಸಬೇಕೆಂದು ಮನವಿಯನ್ನು ಸಲ್ಲಿಸಿರುತ್ತಾರೆ.

ಈ ಬಗ್ಗೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಲಾಗಿದ್ದು ಸುಬ್ರಮಣ್ಯ ಎಜುಕೇಷನ್ ಸೊಸೈಟಿ (ರಿ) ಇವರಿಗೆ ಗುತ್ತಿಗೆ ಆಧಾರದ ಮೇಲೆ 20.00 ಎಕರೆ ಜಮೀನು ಗುತ್ತಿಗೆ ಮಂಜೂರು ಮಾಡುವಾಗ ಕೆಲವೊಂದು ಷರತ್ತುಗಳನ್ನು ವಿಧಿಸಿದ್ದು, ಈ ಪೈಕಿ ಸದರಿ ಜಮೀನನ್ನು ಯಾವ ಉದ್ದೇಶಕ್ಕಾಗಿ ಗುತ್ತಿಗೆ ಆಧಾರದ ಮೇಲೆ ನೀಡಲಾಗಿತ್ತು. ಆ ಉದ್ದೇಶಕ್ಕೆ ಉಪಯೋಗಿಸದೆ ಗುತ್ತಿಗೆ ಷರತ್ತು ಉಲ್ಲಂಘಿಸಿರುವುದು ಕಂಡುಬಂದಿರುವುದರಿಂದ ಸರ್ಕಾರವು ಆರ್.ಡಿ.6 ಎಲ್.ಜಿ.ಬಿ. 2004, ದಿನಾಂಕ:30.06.2004 ಮತ್ತು 08.02.2006 ರಂದು ಸಂಸ್ಥೆಗೆ ಕಾರಣ ಕೇಳಿ ನೋಟೀಸು ನೀಡಿ ಗುತ್ತಿಗೆ ನೀಡಿರುವ ಜಮೀನು ಪೈಕಿ 5.00 ಎಕರೆ ವಿಸ್ತೀರ್ಣವನ್ನು ಕಡಿತಗೊಳಿಸಿ ಸರ್ಕಾರದ ವಶಕ್ಕೆ ಏಕೆ ತೆಗೆದುಕೊಳ್ಳಬಾರದು ಎಂಬ ಬಗ್ಗೆ ನೋಟೀಸು ನೀಡಲಾಗಿರುತ್ತದೆ. ನಂತರ ಉಲ್ಲೇಖದ ಸರ್ಕಾರದ ಆದೇಶದಲ್ಲಿ ಸುಬ್ರಮಣ್ಯ ಎಜುಕೇಷನ್ ಸೊಸೈಟಿ ರವರಿಗೆ ಗುತ್ತಿಗೆ ಆಧಾರದ ಮೇಲೆ ನೀಡಲಾದ 20.00 ಎಕರೆ ಜಮೀನಿನ ಪೈಕಿ 5.00 ಎಕರೆ ಜಮೀನನ್ನು ಹಿಂದಕ್ಕೆ ಪಡೆದು ಅದರಲ್ಲಿ 1.00 ಎಕರೆ ಪ್ರದೇಶವನ್ನು ಸಾರ್ವಜನಿಕ ಸ್ಮಶಾನದ ಉದ್ದೇಶಕ್ಕೆ ಕರ್ನಾಟಕ ಭೂ ಕಂದಾಯ ಕಾಯಿದೆ 1964ರ ಕಲಂ 71ರಂತೆ ಕಾಯ್ದಿರಿಸಲು ಸರ್ಕಾರವು ಅನುಮೋದನೆ ನೀಡಲಾಗಿರುತ್ತದೆ.

ಉಲ್ಲೇಖ (1)ರ ಸರ್ಕಾರವು ಆದೇಶದ ರೀತ್ಯಾ ಬೆಂಗಳೂರು ಉತ್ತರ ತಾಲ್ಲೂಕು, ಯಶವಂತಪುರ ಹೋಬಳಿ, ಹೇರೋಹಳ್ಳಿ ಗ್ರಾಮದ ಸ.ನಂ.63ರಲ್ಲಿ ಶ್ರೀ ಸುಬ್ರಮಣ್ಯ ಎಜುಕೇಷನ್ ಸೊಸೈಟಿ ಇವರಿಗೆ ಗುತ್ತಿಗೆ ನೀಡಲಾದ 20.00 ಎಕರೆ ಜಮೀನು ಪೈಕಿ 5.00 ಎಕರೆ ಜಮೀನನ್ನು ಹಿಂದಕ್ಕೆ ಪಡೆಯಲಾಗಿದೆ ಮತ್ತು ಈ ಪೈಕಿ 1.00 ಎಕರೆ ಜಮೀನನ್ನು ಸಾರ್ವಜನಿಕ ಸ್ಮಶಾನ ಉದ್ದೇಶಕ್ಕೆ ಕರ್ನಾಟಕ ಭೂ ಕಂದಾಯ ಕಾಯಿದೆ 1964ರ ಕಲಂ 71ರಂತೆ ಕಾಯ್ದಿರಿಸಿದೆ ಮತ್ತು ಸದರಿ ಸ್ಮಶಾನದ ಉಸ್ತುವಾರಿಯನ್ನು ಗ್ರಾಮಪಂಚಾಯ್ತಿ ಹೇರೋಹಳ್ಳಿ ರವರಿಗೆ ವಹಿಸಲಾಗಿದೆ.

ವಿಶೇಷ ಜಿಲ್ಲಾಧಿಕಾರಿಗಳು,
ಬೆಂಗಳೂರು ಜಿಲ್ಲೆ, ಬೆಂಗಳೂರು.

ಪಿ.ಆರ್.1544

## ಶಿಕ್ಷಣ ಇಲಾಖೆ

## ಅಧಿಸೂಚನೆ

### ಸಂಖ್ಯೆ: ಇಡಿ 238 ಡಿಪಿಐ 1999, ಬೆಂಗಳೂರು, ದಿನಾಂಕ:27ನೇ ಸೆಪ್ಟೆಂಬರ್, 2006

**ವಿಷಯ:** ಸಾರ್ವಜನಿಕ ಶಿಕ್ಷಣ ಇಲಾಖೆಯ ಗ್ರೂಪ್ ಬಿ ವೃಂದದ ಅಧಿಕಾರಿಗಳ (ಬೋಧಕ ವೃಂದ) 9ನೇ ಬ್ಲಾಕ್‌ನ ಅಂತಿಮ ಜೇಷ್ಠತಾ ಪಟ್ಟಿ ಪ್ರಕಟಣೆ ಬಗ್ಗೆ.

**ಉಲ್ಲೇಖ:** 1. ಸರ್ಕಾರದ ಅಧಿಸೂಚನೆ ಸಂಖ್ಯೆ: ಇಡಿ 377 ಡಿಪಿಐ 95 ದಿನಾಂಕ:09.10.1996.

2. ಸರ್ಕಾರದ ಅಧಿಸೂಚನೆ ಸಂಖ್ಯೆ: ಇಡಿ 371 ಡಿಪಿಐ 2000, ದಿನಾಂಕ:31.01.2002.

3. ಸರ್ಕಾರದ ಅಧಿಸೂಚನೆ ಸಂಖ್ಯೆ: ಇಡಿ 238 ಡಿಪಿಐ 99, ದಿನಾಂಕ:15.02.2005.

4. ಸರ್ಕಾರದ ಅಧಿಸೂಚನೆ ಸಂಖ್ಯೆ: ಇಡಿ 521 ಡಿಪಿಐ 2004, ದಿನಾಂಕ:03.01.2006.

ಸಾರ್ವಜನಿಕ ಶಿಕ್ಷಣ ಇಲಾಖೆಯ, ಮುಖ್ಯ ಶಿಕ್ಷಕರ ಹುದ್ದೆಗಳನ್ನು ಶೇಕಡ 50 ರಷ್ಟು ನೇರ ನೇಮಕಾತಿ ಹಾಗೂ ಶೇಕಡ 50 ರಷ್ಟು ಪದೋನ್ನತಿ ಮೂಲಕ ವೃಂದ ಮತ್ತು ನೇಮಕಾತಿ ನಿಯಮಗಳನ್ವಯ ಬಡ್ತಿ ಮೂಲಕ ತುಂಬಲು ಅವಕಾಶವಿದೆ. ಅದರಂತೆ ಗ್ರೂಪ್–ಬಿ ವೃಂದದ ಬೋಧಕ ವೃಂದದ ಅಧಿಕಾರಿಗಳು ದಿನಾಂಕ: 11.10.1984 ರಿಂದ 13.01.1994 ರ ಅವಧಿಗೆ ಒಟ್ಟು 1324 ಪ್ರೌಢಶಾಲಾ ಮುಖ್ಯೋಪಾಧ್ಯಾಯರ ಖಾಲಿ ಹುದ್ದೆಗಳು ಉದ್ಭವವಾಗಿದ್ದು, 662 ಹುದ್ದೆಗಳನ್ನು ನೇರ ನೇಮಕಾತಿ ಖೋಟಾ (D.R.) ಎಂದು 662 ಹುದ್ದೆಗಳನ್ನು ಪದೋನ್ನತಿ (P.R.)ಖೋಟಾ ಎಂದು ತೋರಿಸಲಾಗಿದೆ. ಅದರಲ್ಲಿ 542 ಪದೋನ್ನತಿ (P.R.) ರಿಕ್ತ ಸ್ಥಾನಗಳನ್ನು ವಾಸ್ತವವಾಗಿ ಉಪಯೋಗಿಸಿಕೊಳ್ಳಲಾಗಿದೆ. ಈ ಪದೋನ್ನತಿ ಖೋಟಾದಡಿ ಉದ್ಭವವಾದ 120 ರಿಕ್ತ ಸ್ಥಾನಗಳನ್ನು ಜೇಷ್ಠತೆ ಅನುಗುಣವಾಗಿ ಬಡ್ತಿಗೆ ಉಪಯೋಗಿಸಿಕೊಳ್ಳಲಾಗಿಲ್ಲದ ಕಾರಣ ಹಾಗೂ ಆ ಸಮಯದಲ್ಲಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ, 32 ರನ್ವಯ ಸ್ವತಂತ್ರ ಪ್ರಭಾರದಲ್ಲಿ ಕಾರ್ಯ ನಿರ್ವಹಿಸುತ್ತಿರುವ 120 ಮುಖ್ಯ ಶಿಕ್ಷಕರುಗಳಿಗೆ 10 ನೇ ಬ್ಲಾಕ್‌ನ ಜೇಷ್ಠತಾ ಪಟ್ಟಿಯಲ್ಲಿ ಸೇರ್ಪಡೆಗೊಳಿಸಲಾಗಿತ್ತು. 10 ನೇ ಬ್ಲಾಕ್‌ನ ಜೇಷ್ಠತಾ ಪಟ್ಟಿಯಲ್ಲಿ ಸ್ಥಾನ ಪಡೆದಿರುವ ಇಂತಹ 120 ಗ್ರೂಪ್–ಬಿ ವೃಂದದ ಅಧಿಕಾರಿಗಳ ಹೆಸರುಗಳನ್ನು ಬೋಧಕ ವೃಂದದಲ್ಲಿ ದಿನಾಂಕ: 11.10.1984 ರಿಂದ 13.10.1994 ರ ಅವಧಿಗೆ 9ನೇ ಬ್ಲಾಕ್ ನಲ್ಲಿ ಸೇರ್ಪಡೆ ಮಾಡಲು ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ತಯಾರಿಸಿ ಸರ್ಕಾರದ ಅಧಿಸೂಚನೆ ಸಂಖ್ಯೆ: ಇಡಿ 238 ಡಿಪಿಐ 99 ದಿನಾಂಕ: 15.02.2005 ರಲ್ಲಿ ಪ್ರಕಟಿಸಲಾಗಿದೆ. ಹಾಗೂ ಈ ಜೇಷ್ಠತಾ ಪಟ್ಟಿಗೆ ಬಾದಿತರಾದ ಅಧಿಕಾರಿಗಳಿಂದ ಸದರಿ ಅಧಿಸೂಚನೆ ಪ್ರಕಟಗೊಂಡ 30 ದಿನಗಳೊಳಗೆ ಏನಾದರೂ ಆಕ್ಷೇಪಣೆಗಳಿದ್ದಲ್ಲಿ ಸಲ್ಲಿಸುವಂತೆ ತಿಳಿಸಲಾಗಿತ್ತು. ಈ ತಾತ್ಕಾಲಿಕ ಜೇಷ್ಠತಾ ಪಟ್ಟಿಗೆ 34 ಆಕ್ಷೇಪಣೆಗಳನ್ನು ಸ್ವೀಕರಿಸಲಾಗಿದೆ.

ಬಂದ ಆಕ್ಷೇಪಣೆಗಳನ್ನೆಲ್ಲಾ ನಿಯಮಾವಳಿಗನುಗುಣವಾಗಿ ಪರಿಶೀಲಿಸಲಾಗಿದೆ. ನೇರ ನೇಮಕಾತಿ ಹೊಂದಿ 9 ನೇ ಬ್ಲಾಕ್‌ನಲ್ಲಿ ಸ್ಥಾನ ಪಡೆದಿರುವವರಿಂದ ಬಂದ ಆಕ್ಷೇಪಣೆಗಳಲ್ಲಿ ಮುಖ್ಯವಾಗಿ ಈಗಾಗಲೇ ಅಂತಿಮಗೊಳಿಸಿದ ಜೇಷ್ಠತಾ ಪಟ್ಟಿಯನ್ನು ಪರಿಷ್ಕರಿಸುವ ಅವಶ್ಯಕತೆ ಇಲ್ಲವೆಂದು ಹೇಳಲಾಗಿದೆ. ಆದರೆ ದಿನಾಂಕ :11.10.1984 ರಿಂದ 13.01.1994 ರ ಅವಧಿ ಹೊಂದಿರುವ ಗ್ರೂಪ್–ಬಿ ಬೋಧಕ ವೃಂದದ 9 ನೇ ಬ್ಲಾಕ್‌ನಲ್ಲಿ ಉದ್ಭವಿಸಿದ ರಿಕ್ತ ಸ್ಥಾನಗಳಲ್ಲಿ ಬಡ್ತಿಗೆ ಉದ್ಭವಿಸಿದ ರಿಕ್ತ ಸ್ಥಾನಗಳನ್ನು ಅರ್ಹ ಅಧಿಕಾರಿಗಳು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 32 ರಡಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅರ್ಹರಿದ್ದರೂ ಕಡೆಗಣಿಸಿರುವುದನ್ನು ಪರಿಗಣಿಸಿ ಈ ರೀತಿ ಬಡ್ತಿಗೆ ಲಭ್ಯವಾದ 120 ರಿಕ್ತ ಸ್ಥಾನಗಳನ್ನು ಶಾರ್ಟ್ ಫಾಲ್ ಎಂದು ನಮೂದಿಸಿರುವುದನ್ನು ಗಣನೆಗೆ ತೆಗೆದುಕೊಂಡು, ಈ 120 ರಿಕ್ತ ಸ್ಥಾನಗಳಿಗೆ ಎದುರಾಗಿ 9 ನೇ ಬ್ಲಾಕ್‌ನ ಈ ಪಟ್ಟಿಯನ್ನು ಕೆ.ಸಿ.ಎಸ್ (ಆರ್.ಪಿ.ಪಿ & ಪಿ) ಅಧಿನಿಯಮಗಳ ಪ್ರಕಾರ ಪರಿಷ್ಕರಿಸುವುದು ಸೂಕ್ತವೆಂದು ಹಾಗೂ ಇದರಿಂದ ನೇರ ನೇಮಕಾತಿ ರಿಕ್ತ ಸ್ಥಾನಗಳಿಗೆ ಯಾವುದೇ ದಕ್ಕೆಯಾಗುವುದಿಲ್ಲವೆಂಬುದನ್ನು ಮನಗಂಡು, ಬಂದ ಆಕ್ಷೇಪಣೆಗಳನ್ನು ಪರಿಶೀಲಿಸಿ ಅಂತಿಮ ಜೇಷ್ಠತಾ ಪಟ್ಟಿಯನ್ನು ಕೇವಲ 9 ನೇ ಬ್ಲಾಕ್‌ಗೆ ಸಂಬಂಧಿಸಿದಂತೆ ಮಾತ್ರ ಪುನರ್ ಪರಿಶೀಲನೆ ಮಾಡಲು ನಿರ್ಧರಿಸಿ, ಈ ಅಧಿಸೂಚನೆಗೆ ಲಗತ್ತಿಸಿರುವಂತೆ ಅಂತಿಮ ಪಟ್ಟಿಯನ್ನು ಹೊರಡಿಸಲಾಗಿದೆ.

ಈ ಪಟ್ಟಿಯನ್ನು ಕೆ.ಸಿ.ಎಸ್ (ಆರ್.ಪಿ.ಪಿ. & ಪಿ) ಅಧಿನಿಯಮಗಳ ನಿಯಮ 4 (1) ರ ಪ್ರಕಾರ ಪರಿಷ್ಕರಿಸಲಾಗಿದ್ದು, ಇದರಿಂದ ಅದೇ ಅಧಿನಿಯಮಗಳ ನಿಯಮ 4(3) ರಲ್ಲಿರುವಂತೆ ಕಾಲ್ಪನಿಕವಾಗಿ ವೇತನ ನಿಗಧಿಪಡಿಸಲು ಮಾತ್ರ ಅವಕಾಶವಿದ್ದು, ಅರ್ಹತಾ ದಿನಾಂಕಗಳನ್ವಯ ವೇತನ ಪರಿಷ್ಕರಣೆಯ ಆರ್ಥಿಕ ಸೌಲಭ್ಯ ಲಭ್ಯವಾಗತಕ್ಕದ್ದಲ್ಲ.

ಉಲ್ಲೇಖ (4) ರಲ್ಲಿರುವ ಅಧಿಸೂಚನೆಯ ದಿನಾಂಕ: 03.01.2006 ರಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ರ್‍ಯಾಕಿಂಗ್ ಬಗ್ಗೆ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ನೀಡಿರುವ ತೀರ್ಪಿಗೆ ಅನುಗುಣವಾಗಿ ಸದರಿ ಜೇಷ್ಠತೆಯನ್ನು ಸರಿಪಡಿಸಿ 9ನೇ ಬ್ಲಾಕ್ ನ ಅಂತಿಮ ಜೇಷ್ಠತಾ ಪಟ್ಟಿಯಲ್ಲಿ ಅವರ ಜೇಷ್ಠತೆಗೆ ಅನುಗುಣವಾಗಿ ಪರಿಷ್ಕರಿಸಿ ಪ್ರಕಟಗೊಳಿಸಿದೆ.

ಸದರಿ ಜೇಷ್ಠತಾ ಪಟ್ಟಿಯನ್ನು ಭಾರತದ ಉಚ್ಚ ನ್ಯಾಯಾಲಯವು ಶ್ರೀ ಗೋನಾಳ್ ಭೀಮಪ್ಪ ಅವರ ಪ್ರಕರಣದಲ್ಲಿ ನೀಡಿದ ತೀರ್ಪಿನನ್ವಯ ಹಾಗೂ ಅಧಿಕೃತ ಜ್ಞಾಪನ ಸಂಖ್ಯೆ: ಡಿಪಿಎಆರ್ 43 ಎಸ್ ಎಸ್ ಆರ್ 87, ದಿನಾಂಕ: 14.12.1987 ರಲ್ಲಿ ನೀಡಿದ ಮಾರ್ಗದರ್ಶನದಂತೆ ಮತ್ತು ತಾತ್ಕಾಲಿಕ ಜೇಷ್ಟತಾ ಪಟ್ಟಿಗೆ ಸಂಬಂಧಿಸಿದಂತೆ ಬಂದಿರುವ ಆಕ್ಷೇಪಣೆಗಳನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯು ಹೊರಡಿಸಿದ ಮಾರ್ಗದರ್ಶನದನ್ವಯ ಕೂಲಂಕಷವಾಗಿ ಪರಿಶೀಲಿಸಿ, ಈ ಆಕ್ಷೇಪಣೆಗಳ ವಾಸ್ತವಾಂಶಗಳನ್ನು ಸಾರ್ವಜನಿಕ ಶಿಕ್ಷಣ ಇಲಾಖೆಯಲ್ಲಿ ದೊರೆತ ದಾಖಲಾತಿಗಳ ಆಧಾರದ ಮೇಲೆ ಪರಿಶೀಲಿಸಿ ಸರ್ಕಾರದ ಇತ್ತೀಚಿನ ಮಾರ್ಗದರ್ಶನದನ್ವಯ ಸಾರ್ವಜನಿಕ ಶಿಕ್ಷಣ ಇಲಾಖೆಯ ಗ್ರೂಪ್ ಬಿ ಅಧಿಕಾರಿಗಳ (ಬೋಧಕ ವೃಂದದ) 9 ನೇ ಬ್ಲಾಕ್ ನ ಪರಿಷ್ಕೃತ ಅಂತಿಮ ಜೇಷ್ಠತಾ ಪಟ್ಟಿಯನ್ನು ತಯಾರಿಸಿ ಪ್ರಕಟಗೊಳಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸ್ವರ್ಣಲತಾ ಎಂ. ಭಂಡಾರೆ**

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ (ಸೇವೆಗಳು 1,2).

**ಸರ್ಕಾರದ ಅಧಿಸೂಚನೆ ಸಂಖ್ಯೆ:ಇಡಿ 238 ಡಿಪಿಐ 99, ದಿನಾಂಕ:27.09.2006, ರ ಅನುಬಂಧ**

ಸಾರ್ವಜನಿಕ ಶಿಕ್ಷಣ ಇಲಾಖೆಯ ಗ್ರೂಪ್–ಬಿ (ಬೋಧಕ) ವೃಂದದ ಅಧಿಕಾರಿಗಳ ದಿನಾಂಕ:11.10.1984 ರಿಂದ 13.01.1994 ರ ವರೆಗಿನ ಅವಧಿಯಲ್ಲಿ, ಮುಂಬಡ್ತಿ / ನೇರನೇಮಕಾತಿ; ಹೊಂದಿದ ಅಧಿಕಾರಿಗಳ ಪರಿಷ್ಕೃತ ಅಂತಿಮ ಜೇಷ್ಠತಾ ಪಟ್ಟಿ (ದಿನಾಂಕ:14.12.1987 ರ ಆದೇಶ ಸಂಖ್ಯೆ:ಡಿಪಿಎಆರ್ 43 ಎಸ್ಆರ್ಇ 87 ರನ್ವಯ ತಯಾರಿಸಿದೆ)

| ಕ್ರಮ ಸಂಖ್ಯೆ | ಘಟಕ | ಎಸ್.ಎಸ್.ಎ ಗ್ರೇಡೇಶನ್ ಪಟ್ಟಿಯಲ್ಲಿ ಕ್ರಮ ಸಂಖ್ಯೆ | ಅಧಿಕಾರಿಗಳ ಹೆಸರು | ಹುಟ್ಟಿದ ದಿನಾಂಕ | ಸೇವೆಗೆ ಸೇರಿದ / ಬಡ್ತಿ ದಿನಾಂಕ | ಅರ್ಹತಾ ದಿನಾಂಕ | ಷರಾ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 1. | M | 286 | ಆರ್.ಪಂಚಪ್ಪ | 01–07–30 | 13–01–84 | | |
| 2. | T | 128 | ಎನ್.ಸತ್ಯನಾರಾಯಣರಾವ್ | 14–03–33 | 13–01–84 | | |
| 3. | T | 242 | ಆರ್.ಡಿ.ಬಸವಣ್ಣಪ್ಪ | 09–08–39 | 13–01–84 | | |
| 4. | G | 121 | ಸುಮಿತ್ರಮ್ಮ | 13–08–32 | 13–01–84 | | |
| 5. | G | 122 | ವಿ.ಕಮಲ | 06–03–32 | 13–01–84 | | |
| 6. | G | 208 | ಬಿ.ರಾಜರಾಜ ಉಪಾಧ್ಯಾಯ | 08–10–34 | 13–01–84 | | |
| 7. | G | 209 | ವಿಠಲ ರಾವ್ | 06–10–29 | 13–01–84 | | |
| 8. | G | 220 | ಕೆ.ಶೇಶಪ್ಪಗೌಡ | 14–03–32 | 13–01–84 | | |
| 9. | G | 221 | ಎನ್.ಜಿ.ನಾಯಕ್ | 04–02–38 | 13–01–84 | | |
| 10. | M | 309 | ಬಿ.ಎಂ.ಬಡ್ಡಿಯಾವರ್ | 05–02–33 | 13–01–84 | | |
| 11. | T | 243 | ಎ.ಬಿ.ಅನಂತರಾಮಯ್ಯ | 22–05–34 | 13–01–84 | | |
| 12. | T | 244 | ಪಿ.ಎ.ಗಣೇಶಪ್ಪ | 06–11–39 | 13–01–84 | | |
| 13. | G | 231 | ವಿ.ಡಿ.ಕುಲಕರ್ಣಿ | 11–08–33 | 13–01–84 | | |
| 14. | G | 240 | ಬಿ.ವೆಂಕಟರತ್ನಮ್ಮ | 06–07–34 | 13–01–84 | | |
| 15. | G | 241 | ಎಸ್.ಸುಶೀಲ | 08–10–31 | 13–01–84 | | |
| 16. | G | 244 | ಟಿ.ಎಸ್.ಕುಲಕರ್ಣಿ | 05–11–30 | 13–01–84 | | |
| 17. | G | 252 | ಟಿ.ಆರ್.ತಾವರೆಗೆರೆ | 01–03–33 | 13–01–84 | | |
| 18. | G | 253 | ಬಿ.ಆರ್.ನಡುವಿನಮನಿ | 30–09–33 | 13–01–84 | | |
| 19. | M | 316 | ಎ.ವಿ.ಚಂದ್ರಮೌಳಿ | 05–08–37 | 13–01–84 | | |
| 20. | T | 247 | ಹೆಚ್.ಬಿ.ರಾಜಪ್ಪ | 15–05–38 | 13–01–84 | | |
| 21. | T | 248 | ಆರ್.ನರಸಿಂಹಮೂರ್ತಿ | 05–09–43 | 13–01–84 | | |
| 22. | G | 225 | ಜೆ.ಎಂ.ಹೊಸಳಿಕರ್ | 06–02–32 | 13–01–84 | | |
| 23. | G | 258 | ಎ.ಎನ್.ಧಖಾನಿ | 06–06–36 | 13–01–84 | | |
| 24. | G | 285 | ಟಿ.ಎ.ಲಕ್ಷ್ಮೀನಾರಾಯಣರಾವ್ | 06–12–30 | 13–01–84 | | |
| 25. | G | 292 | ಬಲವಂತ ರಾವ್ ದೀಕ್ಷಿತ್ | 11–10–33 | 13–01–84 | | |
| 26. | G | 300 | ಜಿ.ಎ.ದೊಡ್ಡಣ್ಣವರ್ | 20–01–30 | 13–01–84 | | |
| 27. | G | 309 | ವಿ.ನಾರಾಯಣ ರಾವ್ | 04–05–32 | 13–01–84 | | |
| 28. | M | 339 | ಆರ್.ಎಸ್.ರಾಮಚಂದ್ರರಾವ್ | 20–06–35 | 13–01–84 | | |
| 29. | T | 249 | ಬಿ.ಎಸ್.ನಿರ್ವಾಣಿಗೌಡ | 31–12–35 | 13–01–84 | | |
| 30. | T | 240 | ಟಿ.ಕೆ.ಚಂದ್ರಪ್ಪ | 14–06–37 | 13–01–84 | | |
| 31. | G | 311 | ಆರ್.ಎಂ.ಗುಂಡೂರಾವ್ | 01–04–29 | 13–01–84 | | |
| 32. | G | 314 | ಟಿ.ಎಸ್.ಶ್ರೀನಿವಾಸ ಮೂರ್ತಿ | 31–05–33 | 13–01–84 | | |
| 33. | G | 315 | ವಿ.ನಾಗರಾಜು | 03–05–34 | 13–01–84 | | |
| 34. | G | 316 | ಎಲ್.ರಾಮಕೃಷ್ಣ | 15–09–35 | 13–01–84 | | |
| 35. | G | 317 | ಆರ್.ಎಸ್.ರಾಮಣ್ಣ | 24–04–32 | 13–01–84 | | |
| 36. | G | 318 | ಜುಬೇದಾ ಬೇಗಮ್ | 15–09–36 | 13–01–84 | | |
| 37. | M | 342 | ಫರಾಹತ್ತುನ್ನೀಸಾ | 05–01–37 | 13–01–84 | | |
| 38. | T | 251 | ಬಿ.ವಿ.ನಾಗರಾಜು | 22–05–39 | 13–01–84 | | |

